# ಬೃಹತೀಸಹಸ್ರಮ್



ಸಂಕಲನಕಾರರು: ಶ್ರೀಯುತ ಡಾ। ಕದ್ರಿ ಪ್ರಭಾಕರ ಅಡಿಗ

ಪ್ರಕಾಶನ: ಶ್ರೀನಿವಾಸ ಯುನಿವರ್ಸಿಟಿ, ಮುಕ್ಕ ಮಂಗಳೂರು
ಮತ್ತು
ಅದ್ಯ ಶಾಮರಾವ್ ಪ್ರತಿಷ್ಠಾನ, ಮಂಗಳೂರು

# ಬೃಹತೀಸಹಸ್ರಮ್

ಸಂಕಲನಕಾರರು

ಡಾ। ಕದ್ರಿ ಪ್ರಭಾಕರ ಅಡಿಗ

ಪ್ರಕಾಶನ

ಶ್ರೀನಿವಾಸ ಯುನಿವರ್ಸಿಟಿ

ಮುಕ್ಕ, ಮಂಗಳೂರು

ಮತ್ತು

ಅಡ್ಕ ಶಾಮರಾವ್ ಪ್ರತಿಷ್ಠಾನ

ಮಂಗಳೂರು

# Bṛhatīsahasram

## The Vedic Mantras of Bṛhatisahasra Homa with pronunciation notes.

Compiler : **Dr. Kadri Prabhakara Adiga**
"Madhwesha Nilaya"
Manjunatha Colony, Bejai Post, Kadri
Mangalore-575 004
Mobile : 9845761390

Published by : **Srinivasa University**
Mukka, Mangalore -and -
**Adka Shama Rao Foundation**
Mangalore.



Year of Publication : 2018

Pages : xxxii+ 166

**Rs. 225-00**

*DTP by* : Dr. K. Padmanabha Kekunnaya, Udupi. (Mob. 9342438727)
*Printed at* : Bharath Press, Kalsanka, Udupi

# ಬೃಹತೀಸಹಸ್ರದ ಆರಾಧ್ಯಮೂರ್ತಿ
# ಗರುಡಗಮನನಾದ ಶ್ರೀಕರ



ಆದಿತ್ಯಚಂದ್ರಾವಪಿ ಚಕ್ರಶಂಖೌ
ಶಂಖಪ್ರಸೂನಾಖ್ಯನಿಧೀ ದಧಾನಃ ।
ಚಿಂತ್ಯಃ ಕರಾಭ್ಯಾಂ ವಸು ತರ್ಪಯನ್ನಃ
ಸ್ವಾಂಕಸ್ಥಲಕ್ಷ್ಮೀರ್ಗರುಡಾಂಸಸಂಸ್ಥಃ ॥

# ಕದ್ರಿಯ ಶ್ರೀಮಂಜುನಾಥಸ್ವಾಮಿ



ಚಕ್ರಪಾಣೇ ನಮಸ್ತುಭ್ಯಂ ನಮಃ ಶಂಖಕರಾಯ ತೇ ।
ಅಭಯಜ್ಞಾನಮುದ್ರಾಯ ಮಂಜುನಾಥಾಯ ತೇ ನಮಃ ॥

ತಮ್ಮ ಪಂಚಮಪರ್ಯಾಯದಲ್ಲಿ ಶಿಷ್ಯರಿಂದ ಕೂಡಿ
ಶ್ರೀಕೃಷ್ಣಪೂಜಾಕೈಂಕರ್ಯವನ್ನು ಪೂರಯಿಸಿದ ಗುರು

## ಪೇಜಾವರಮಠಾಧೀಶ

## ಶ್ರೀಶ್ರೀವಿಶ್ವೇಶತೀರ್ಥಶ್ರೀಪಾದರು



ವಿಶ್ವೇಶಂ ವಿಶ್ವವಂದ್ಯಂ ತಂ ಸಶಿಷ್ಯಗುರುಪೂಜಿತಮ್ ।
ಪ್ರಾಣೇಶಂ ಜ್ಞಾನದಂ ಕೃಷ್ಣಂ ವಂದೇ ಮಧ್ವಕರಾರ್ಚಿತಮ್ ॥

ಪೇಜಾವರಮಠದ ಕಿರಿಯ ಯತಿ

ಶ್ರೀಶ್ರೀ ವಿಶ್ವಪ್ರಸನ್ನತೀರ್ಥಸ್ವಾಮೀಜಿಯವರು



ಇವರ ಶುಭಾಶೀರ್ವಚನಪೂರ್ವಕ

ಪ್ರಸ್ತುತ ಶ್ರೀಕೃಷ್ಣಪೂಜಾಪರ್ಯಾಯದೀಕ್ಷಾಬದ್ಧರಾದ

ಪಲಿಮಾರು ಮಠಾಧೀಶ

## ಶ್ರೀಶ್ರೀವಿದ್ಯಾಧೀಶತೀರ್ಥಶ್ರೀಪಾದರ

ಶುಭಾನುಗ್ರಹಪೂರ್ವಕ



ಹರಿಂ ಕೃಷ್ಣಂ ಗುರುಂ ವ್ಯಾಸಂ ಗುರುಮಧ್ವಕರಾರ್ಚಿತಮ್ ।
ವಿದ್ಯಾಧೀಶಮುನೀಶಂ ತಂ ವಂದೇಽಹಂ ಪ್ರಾಣನಾಯಕಮ್ ॥

**ಶ್ರೀಶ್ರೀ ವಿದ್ಯಾಪ್ರಸನ್ನತೀರ್ಥಸ್ವಾಮೀಜಿ**
ಜಗದ್ಗುರು ಶ್ರೀ ಮಧ್ವಾಚಾರ್ಯ ಮಹಾಸಂಸ್ಥಾನಮ್
ಶ್ರೀಸಂಪುಟ ನರಸಿಂಹಸ್ವಾಮಿ, ಶ್ರೀ ಸುಬ್ರಹ್ಮಣ್ಯ ಮಠ,
ಸುಬ್ರಹ್ಮಣ್ಯ – 574 238. ಸುಳ್ಯ ತಾಲೂಕು, ದ.ಕ.
ದೂರವಾಣಿ : 08257-281221, 281211



## ಅನುಗ್ರಹಸಂದೇಶ

ಧರ್ಮಸಾಧನೆಗೆ ಶರೀರ ಮುಖ್ಯ. ಶರೀರದ ಸ್ವಾಸ್ಥ್ಯಕ್ಕೆ ಕ್ರಿಯಾಶೀಲವಾದ ನಾಡಿಗಳು ಮುಖ್ಯ. ಮನುಷ್ಯನ ದೇಹದಲ್ಲಿ ೭೨,೦೦೦ ನಾಡಿಗಳು ಇವೆ. ಇವು ಜಾಗೃತವಾದಾಗ ಮನುಷ್ಯನ ದೈಹಿಕ ಮತ್ತು ಮಾನಸಿಕಸ್ವಾಸ್ಥ್ಯ ಪೂರ್ಣವಾಗಿರುತ್ತದೆ. ಲೌಕಿಕ ಮತ್ತು ಆಧ್ಯಾತ್ಮಿಕ ಬದುಕು ಸಮನ್ವಿತವಾಗಿರುತ್ತದೆ.

ನಾಡಿಗಳ ಜಾಗೃತಿಗೆ ಪೂರಕವಾದವುಗಳು ವಿಷ್ಣುಸಹಸ್ರನಾಮಗಳು. ಮಹಾಭಾರತದ ಸಾರರೂಪ. ಈ ಸಹಸ್ರನಾಮಗಳಿಗೆ ವ್ಯಾಖ್ಯೇಯವೆಂದೇ ಪ್ರಸಿದ್ಧವಾದವುಗಳು ಬೃಹತೀಸಹಸ್ರಮಂತ್ರಗಳು. ವೇದಮಂತ್ರಗಳ ಸಾರರೂಪಗಳು. ಈ ಸಾವಿರ ಮಂತ್ರಗಳ ಪಠನವು ವಾತಾವರಣದಲ್ಲಿ ಮತ್ತು ನಮ್ಮ ದೇಹದ ನಾಡಿಗಳಲ್ಲಿ ಸ್ಪಂದನವನ್ನುಂಟುಮಾಡಬಲ್ಲವು. ಇವುಗಳ ಲೆಕ್ಕಾಚಾರದಲ್ಲಿ ಸೂಕ್ಷ್ಮತೆ ಇದೆ; ಗೊಂದಲಗಳಿವೆ. ಇದರ ಬಗ್ಗೆ ವಿಶಿಷ್ಟ ವಿಮರ್ಶೆಯ ಮೂಲಕ ಶ್ರಮಸಾಧ್ಯವಾದ ಒಂದು ಅಮೂಲ್ಯಗ್ರಂಥವನ್ನು ಶ್ರೀಯುತ ವಿದ್ವಾನ್ ಪ್ರಭಾಕರ ಅಡಿಗರು ನೀಡುತ್ತಿದ್ದಾರೆ.

ಈಗಾಗಲೇ ಬಹಳಷ್ಟು ಅಮೂಲ್ಯವಾದ ಪುಸ್ತಕಗಳನ್ನು ನೀಡಿರುವ ಅಡಿಗರ ಕ್ರಮಚಿಂತನೆಗಳು ಅಭಿನಂದನೀಯವಾದವುಗಳು. ಅವರಿಂದ ಆಸ್ತಿಕ ಜಗತ್ತಿಗೆ ಪೂರಕವಾದ ಇನ್ನಷ್ಟು ಪುಸ್ತಕಗಳು ಪ್ರಕಟವಾಗಲೆಂದು ಆಶಿಸುತ್ತೇವೆ.

ಇತಿ ಶ್ರೀಮನ್ನಾರಾಯಣಸ್ಮರಣೆಗಳು–

(ಶ್ರೀಶ್ರೀವಿದ್ಯಾಪ್ರಸನ್ನತೀರ್ಥಸ್ವಾಮೀಜಿ)



# ಶುಭಸಂದೇಶ

ವೇದಮೂರ್ತಿ ವಿದ್ವಾನ್ ಶ್ರೀ ಡಾ। ಪ್ರಭಾಕರ ಅಡಿಗರು 'ಬೃಹತೀಸಹಸ್ರ'ವೆಂಬ ವಿಷ್ಣುಸಹಸ್ರನಾಮದ ಮೂಲವಾದ ವೇದಮಂತ್ರಗಳಿಗೆ ಸ್ವರ ಹಾಕಿ ಎಲ್ಲ ಜಿಜ್ಞಾಸುಗಳಿಗೂ ಪುರೋಹಿತರುಗಳಿಗೂ ತುಂಬಾ ಉಪಕಾರವನ್ನು ಮಾಡಿದ್ದಾರೆ. ಅವರು ಇನ್ನು ಮುಂದೆಯೂ ಒಳ್ಳೊಳ್ಳೆಯ ಜ್ಞಾನಕಾರ್ಯಗಳನ್ನು ಮಾಡಿ ಪುಣ್ಯ-ಕೀರ್ತಿ ಗಳಿಸಲೆಂದು ಹೃತ್ಪೂರ್ವಕವಾಗಿ ಅವರನ್ನು ಅಭಿನಂದಿಸುತ್ತೇವೆ.

**CA. ಎ. ರಾಘವೇಂದ್ರ ರಾವ್**

ಛಾನ್ಸಲರ್, ಶ್ರೀನಿವಾಸ ಯುನಿವರ್ಸಿಟಿ, ಮುಕ್ಕ, ಮಂಗಳೂರು

ಮತ್ತು

ಅಧ್ಯಕ್ಷರು, ಎ. ಶಾಮರಾವ್ ಫೌಂಡೇಶನ್, ಮಂಗಳೂರು

# ಶುಭಾಶಯ



ಜಗದ್ಗುರು ಮಧ್ವಾಚಾರ್ಯ ಪರಂಪರೆಯ ಶಾಸ್ತ್ರಾದಿ ಧಾರ್ಮಿಕ ವಿಧಿವಿಧಾನಗಳ ಅನುಷ್ಠಾನಗಳಲ್ಲಿ ಬೃಹತೀಸಹಸ್ರ ಮಂತ್ರವು ಪ್ರಮುಖವಾದುದು. ಆಚಾರ್ಯ ಮಧ್ವರಿಂದ ಉಪದೇಶಿಸಲ್ಪಟ್ಟ ವೇದ ಶಾಸ್ತ್ರಗಳ ಸತ್ವವನ್ನು ಪಾರಿಜಾತ ವೃಕ್ಷಕ್ಕೆ ತುಲನೆ ಮಾಡಿದರೆ ಮನುಕುಲಕ್ಕೆ ಆ ಪಾರಿಜಾತ ವೃಕ್ಷದ ಅನುಗ್ರಹವೇ ಪಾರಿಜಾತಪುಷ್ಪ.

ವೇದಾದಿ ಶಾಸ್ತ್ರಗಳೇ ಪಾರಿಜಾತ ವೃಕ್ಷವಾದರೆ ಆ ಪಾರಿಜಾತ ವೃಕ್ಷದ ಸಾರವಾದ ಪಾರಿಜಾತ ಪುಷ್ಪವೇ ಮಹಾಭಾರತ. ಪಾರಿಜಾತ ಪುಷ್ಪದ ಮಕರಂದವೇ ಮಹಾಭಾರತದ ಸಾರವಾದ ಭಗವದ್ಗೀತೆ, ವಿಷ್ಣು ಸಹಸ್ರನಾಮ.

ಮುಕ್ತಿಪ್ರದವಾದ ವಿಷ್ಣುಸಹಸ್ರನಾಮದ ಮೂಲವೇ 'ಬೃಹತೀಸಹಸ್ರ' ಎಂಬುದಾಗಿ ಆಚಾರ್ಯ ಮಧ್ವರ ವ್ಯಾಖ್ಯಾನ.

ಇಂತಹ ಬೃಹತೀಸಹಸ್ರಮಂತ್ರವು ಸ್ವರ ಸಹಿತವಾಗಿ ಉಚ್ಚರಿಸಲು ಯೋಗ್ಯವಾದ ರೀತಿಯಲ್ಲಿ ಅನುಷ್ಠಾನಕ್ಕೆ ಪೂರಕವಾದ ವೇದಮೂರ್ತಿ ಡಾ. ಕದ್ರಿ ಪ್ರಭಾಕರ ಅಡಿಗರು ರಚಿಸಿರುವ ಈ ಪುಸ್ತಕವು ಒಂದು ಅಮೂಲ್ಯವಾದ ಕೃತಿ ಎಂಬುದು ನಮಗೆಲ್ಲ ತುಂಬಾ ಅಭಿಮಾನದ ಸಂಗತಿ. ಚತುರ್ವೇದಶಾಸ್ತ್ರ, ಪುರಾಣ, ವೇದವ್ಯಾಕರಣ ಹೀಗೆ ಎಲ್ಲಾ ಆಯಾಮಗಳಲ್ಲೂ ನಾಡು ಕಂಡ ಓರ್ವ ಶ್ರೇಷ್ಠ ವಿದ್ವಾಂಸ, ಸಾಧಕ ಶ್ರೀಯುತ ಕದ್ರಿ ಪ್ರಭಾಕರ ಅಡಿಗರು ತಿರುಪತಿ ಸಂಸ್ಕೃತ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪದವಿಗೂ ಭಾಜನರಾಗಿ, ಅಲ್ಲದೆ ಸುಬ್ರಹ್ಮಣ್ಯದಲ್ಲಿ ನಡೆದ ೨೨ನೇ ದಕ್ಷಿಣಕನ್ನಡ ಸಾಹಿತ್ಯ ಜಿಲ್ಲಾ ಕನ್ನಡ ಸಮ್ಮೇಳನದಲ್ಲಿ ವಿದ್ವತ್ ಸನ್ಮಾನ ಅಲ್ಲದೆ ಕರ್ನಾಟಕ ಸರಕಾರದ ಧಾರ್ಮಿಕ ದತ್ತಿ ಇಲಾಖೆಯಿಂದ (ಪ್ರತಿಭಾಸಂಪನ್ನರಾದ ಅರ್ಚಕ) ಎಂಬ ಪ್ರಶಸ್ತಿಗೆ ಮಾನ್ಯರಾದ ಇವರು ಕಲ್ಕೂರ ಪ್ರತಿಷ್ಠಾನದಿಂದ ಕಲ್ಕೂರ ವೇದವಾರಿಧಿಸಿರಿ ಪ್ರಶಸ್ತಿಯಿಂದಲೂ ಪುರಸ್ಕೃತರಾಗಿದ್ದಾರೆ.

ಉಡುಪಿಯ ಅಷ್ಟಮಠಾಧೀಶರುಗಳಿಂದಲೂ ಸನ್ಮಾನಿತರಾದ ಡಾ. ಕದ್ರಿ ಪ್ರಭಾಕರ ಅಡಿಗರಿಂದ ಇನ್ನಷ್ಟು ವಿದ್ವತ್ ಪೂರ್ಣ ಸಾಹಿತ್ಯ ಕೃತಿಗಳು ಮೂಡಿಬರಲೆಂಬುದು ನಮ್ಮೆಲ್ಲರ ಆಶಯ.

ಎಸ್. ಪ್ರದೀಪಕುಮಾರ ಕಲ್ಕೂರ
ಅಧ್ಯಕ್ಷರು
ದ.ಕ. ಜಿಲ್ಲಾಕನ್ನಡ ಸಾಹಿತ್ಯ ಪರಿಷತ್ತು

# ಸಂಪಾದಕರ ನುಡಿ

ಶಾಸ್ತ್ರೇಷು ಭಾರತಂ ಸಾರಂ ತತ್ರ ನಾಮಸಹಸ್ರಕಮ್ ।
ವೈಷ್ಣವಂ ಕೃಷ್ಣಗೀತಾ ಚ ತಜ್ಜ್ಞಾನ್ಮುಚ್ಯತೇಽಂಜಸಾ ॥
ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ ।
ವಿಷ್ಣೋಃ ಸಹಸ್ರನಾಮಾಪಿ ಜ್ಞೇಯಂ ಪಾಠ್ಯಂ ಚ ತದ್ದ್ವಯಮ್ ॥
– ಗೀತಾಭಾಷ್ಯಮ್ ॥

ಗೀತಾಭಾಷ್ಯದಲ್ಲಿ ಮಧ್ವಗುರುಗಳು ಗೀತಾಪ್ರಾಮಾಣ್ಯವನ್ನು ಸಮರ್ಥಿಸುವ ಸಂದರ್ಭದಲ್ಲಿ ಹೇಳಿದ ಈ ಪುರಾಣಪ್ರಮಾಣವಾಕ್ಯಗಳು ಸಹಸ್ರನಾಮದ ಮಹತ್ತ್ವವನ್ನು ತಿಳಿಸುತ್ತವೆ. ಸರ್ವಶಾಸ್ತ್ರಸಾರವಾದ ಮಹಾಭಾರತದ ಸಾರಗಳು ಎರಡು: ಅವೇ ಗೀತೆ ಮತ್ತು ಸಹಸ್ರನಾಮಗಳು. ಅಂದರೆ ಭಗವದ್ಗೀತೆ ಹಾಗೂ ವಿಷ್ಣುಸಹಸ್ರನಾಮಗಳೆಂದರ್ಥ. ನಿರ್ವಿಶೇಷಿತಸೂತ್ರ, ಗೀತೆ, ಸಹಸ್ರನಾಮಗಳೆಂದರೆ ಬ್ರಹ್ಮಸೂತ್ರ, ಭಗವದ್ಗೀತೆ, ವಿಷ್ಣುಸಹಸ್ರನಾಮಗಳೆಂದೇ ಅರ್ಥ. ಇಂತಹ ವಿಷ್ಣುಸಹಸ್ರನಾಮ ಭಗವಂತನ ಅನಂತಗುಣಗಳ ಪರಿಪೂರ್ಣತ್ವವನ್ನು ಪ್ರತಿ ನಾಮ ದಿಂದಲೂಕೊಂಡಾಡುವುದು. ವೇದಮೂಲವಾದ ಈ ನಾಮಗಳಿಗೆ ಮೂಲವೇ ಬೃಹತೀಸಹಸ್ರವೆನ್ನುತ್ತಾರೆ ಜ್ಞಾನಿಗಳು. ಬೃಹತೀಸಹಸ್ರದಲ್ಲಿನ ಪ್ರತೀಮಂತ್ರವೂ ಸಹಸ್ರನಾಮಕ್ಕೆ ಮೂಲವೇ ಆಗಿದೆ. ಆದುದರಿಂದಲೇ ವೈಷ್ಣವಪರಂಪರೆಯಲ್ಲಿ ಐತರೇಯ ಉಪನಿಷತ್ತಿನಲ್ಲಿ ಉಲ್ಲೇಖಿತವಾದ ಬಾಹುಲ್ಯೇನ ಋಜ್ಮೂಲವಾದ ಈ ಬೃಹತೀಸಹಸ್ರಕ್ಕೆ ತುಂಬಾ ಮಹತ್ವ ನೀಡುತ್ತಾರೆ. ಈ ಬೃಹತೀಸಹಸ್ರಮಂತ್ರಗಳನ್ನು ನಿತ್ಯಪಠಣಮಾಡುವ ವೈಷ್ಣವರು ತುಂಬಾ ಮಂದಿಯಿದ್ದಾರೆ. ಅಲ್ಲದೆ ಈ ಮಂತ್ರ ಗಳಿಂದ ಹೋಮಮಾಡುವ ಪದ್ಧತಿಯೂ ವೈಷ್ಣವರ ಪರಂಪರೆಯಲ್ಲಿದೆ.

ಯದ್ಯಪಿ ವಿಶ್ವಜಿತ್ ಎಂಬ ಪ್ರಸಿದ್ಧ ಶ್ರೌತಯಾಗದ ಮಾಧ್ಯಂದಿನ ಸವನದಲ್ಲಿನ ನಿಷ್ಕೇವಲ್ಯವೆಂಬ ಶಸ್ತ್ರಮಂತ್ರಗಳೇ ಈ ಬೃಹತೀಶಸ್ತ್ರಮಂತ್ರಗಳೆನ್ನುತ್ತಾರೆ ವ್ಯಾಖ್ಯಾನ ಕಾರರು. ಇಂದ್ರನು ವೃತ್ರನನ್ನು ಸಂಹರಿಸಿ ಪಾಪಪ್ರಾಯಶ್ಚಿತ್ತವಾಗಿ ಮಹಾವ್ರತವೆಂಬ ಯಾಗವನ್ನು ಮಾಡುತ್ತಾನೆ. ಅದರಲ್ಲಿ ವಿಶ್ವಾಮಿತ್ರ ಮಹರ್ಷಿಗಳೇ ಹೋತೃ ವಾಗಿದ್ದರು. ಭೃಗುಮಹರ್ಷಿಗಳು ಅಧ್ವರ್ಯುವಾಗಿದ್ದರು. ವಾಯುದೇವರೇ ಉದ್ಗಾತೃವಗಿದ್ದರು. ಸಾಕ್ಷಾದ್ ಬ್ರಹ್ಮದೇವರೇ ಬ್ರಹ್ಮರಾಗಿದ್ದರು. ಆ ಯಾಗದಲ್ಲಿ ಭಗವನ್ನಾರಾಯಣನನ್ನು ಸ್ಮರಿಸುತ್ತಾ ವಿಶ್ವಾಮಿತ್ರನು ಬೃಹತೀಸಹಸ್ರವನ್ನು ಪಠಿಸಲು ಪ್ರಾಣದೇವರಿಂದ ಸಹಿತನಾಗಿ, ವಿಷ್ಣುವು ಇಂದ್ರನಲ್ಲಿ ಆವಿಷ್ಟನಾಗಿ ಒಟ್ಟು ಮೂರು

ಬಾರಿ ವಿಶ್ವಾಮಿತ್ರನಿಂದ ಬೃಹತೀಸಹಸ್ರವನ್ನು ಪಠಿಸುವಂತೆ ಆಜ್ಞಾಪಿಸಿದನು. ಈ ಮಂತ್ರಗಳು ಪ್ರಾಣನೊಳಗಿರುವ ಭಗವಂತನಿಗೆ ಅನ್ನದಂತೆ ಅತಿಪ್ರಿಯವಾಗಿವೆ ಎನ್ನುತ್ತಾರೆ ವಿಶ್ವಾಮಿತ್ರರು. ಈ ಮಂತ್ರಪಠಿಸುವವನು ಭಗವಂತನಿಗೆ ಅತ್ಯಂತ ಪ್ರಿಯನೂ ಭಗವದನುಗ್ರಹದಿಂದ ಇಹದಲ್ಲಿ ಸಕಲಪಾಪಪರಿಹಾರವನ್ನು ಹೊಂದಿ ಅನ್ನಾದಿಗಳಿಂದ ಸಮೃದ್ಧನಾಗಿ ಕಾಲಾನಂತರ ಭಗವಂತನ ಅತ್ಯಂತ ಸಾಮೀಪ್ಯ ವನ್ನೂ ಪಡೆಯುವನು ಎನ್ನುತ್ತವೆ ಪ್ರಮಾಣವಾಕ್ಯಗಳು. ಇದರ ಪಠನವು ನೂರು ವರುಷ ಹರಿಧ್ಯಾನದ ಫಲವನ್ನು ನೀಡುವುದೆಂದು ಗುರುಮಧ್ವರು ಸ್ವಭಾಷ್ಯದಲ್ಲಿ ನುಡಿದಿದ್ದಾರೆ. ಐತರೇಯ ಭಾಷ್ಯದಲ್ಲಿ ಇದರ ಮಹತ್ವವನ್ನು ಕಾಣಬಹುದಾಗಿದೆ.

ಬೃಹತೀಸಹಸ್ರವೆಂಬ ಹೆಸರನ್ನು ನೋಡಿ ಈ ಮಂತ್ರಗಳು ಬೃಹತೀಛಂದಸ್ಸಿನಲ್ಲಿವೆಯೆಂದು ತಿಳಿಯುತ್ತಾರೆ. ಮಂತ್ರಗಳನ್ನು ಸರಿಯಾಗಿ ನೋಡಿದಾಗ ಹಾಗೇನೂ ಕಂಡುಬರುವುದಿಲ್ಲ. ಇದರ ಹೆಸರಷ್ಟೇ ಬೃಹತೀ ಎಂದು. ಸಮಗ್ರಮಂತ್ರಸಮೂಹದಲ್ಲಿ ಸ್ವರವ್ಯಂಜನಗಳಿಂದ ಕೂಡಿದ ಒಟ್ಟು ಮೂವತ್ತಾರು ಸಾವಿರ ಅಕ್ಷರಗಳು ಈ ಮಂತ್ರಗಳಲ್ಲಿವೆಯೆಂದು ಬಲ್ಲವರು ಹೇಳುತ್ತಾರೆ. ಇವುಗಳ ಪಠನದಿಂದ ಮನುಷ್ಯನ ಎಪ್ಪತ್ತೆರಡು ಸಾವಿರ ನಾಡಿಗಳು ಶುದ್ಧವಾಗಿ ಮನುಷ್ಯ ಸಕಲ ಪಾಪಗಳಿಂದಲೂ ತನ್ಮೂಲವಾದ ರೋಗಗಳಿಂದಲೂ ಮುಕ್ತವಾಗುತ್ತಾನೆ ಎನ್ನುತ್ತವೆ ಪ್ರಮಾಣವಾಕ್ಯಗಳು. ಈ ಮಂತ್ರಗಳನ್ನು ಬಳಸಿ ಹೋಮಿಸುವ ಪದ್ಧತಿಯೂ ಪರಂಪರೆಯಿಂದ ವೈಷ್ಣವರಲ್ಲಿ ಬಂದಿದೆ. ಈ ಮಂತ್ರಗಳನ್ನು ಸ್ವರರಹಿತವಾಗಿ ಶ್ಲೋಕಗಳಂತೆ ಪಠಿಸಿ ಹೋಮಿಸುವುದು ಹಾಗೂ ಸಸ್ವರವಾಗಿ ಉಚ್ಚರಿಸಿ ಆಹುತಿಕೊಡುವುದು ಹೀಗೆ ಎರಡೂ ಕ್ರಮಗಳುಂಟು.

"ಯಜ್ಞಕರ್ಮಣಿ ಅಜಪನ್ಯೂಂಖ ಸಾಮಸು" ಎಂಬ ಪಾಣಿನೀಯ ವೈದಿಕಸೂತ್ರದಲ್ಲಿ ಹೇಳಿದಂತೆ ಜಪಾದಿಗಳನ್ನು ಹೊರತುಪಡಿಸಿ ಹೋಮದಲ್ಲಿ ವೇದಮಂತ್ರಗಳನ್ನು ಏಕಶ್ರುತಿಯಲ್ಲಿ ಹೇಳುವುದು ಹೆಚ್ಚು ಪ್ರಾಮಾಣಿಕವೆನಿಸುತ್ತದೆ.

ಆದರೆ ನಾನು ಇಲ್ಲಿ ಸ್ವರಸಹಿತವಾಗಿ ಬೃಹತೀಸಹಸ್ರದ ಮಂತ್ರಗಳನ್ನು ನೀಡಿದ್ದೇನೆ. ಮಂತ್ರಗಳಲ್ಲಿನ ಪದಗಳನ್ನು ಬೇರ್ಪಡಿಸಿ ಬೇರೆ ಮಂತ್ರದೊಂದಿಗೆ ಜೋಡಿಸುವ ಸಂದರ್ಭದಲ್ಲಿ ವರ್ಣವಿಕಾರ ಸ್ವರವಿಕಾರಾದಿಗಳಾಗುವ ಅವಕಾಶವು ಹೆಚ್ಚಿರುವುದರಿಂದ ಸರಿಯಾಗಿ ವಿಮರ್ಶಿಸಿ ಈ ಕೆಲಸ ಮಾಡಬೇಕಾಗುವುದು. ಈ ರೀತಿಯ ಕೆಲಸದಲ್ಲಿ ತಿಳಿವಳಿಕೆ, ಶ್ರದ್ಧೆ, ತನ್ಮಯತೆ ತುಂಬಾ ಮುಖ್ಯವಾಗಿದ್ದು ಈ ಕೆಲಸವನ್ನು ಆದಷ್ಟು ಪ್ರಾಮಾಣಿಕವಾಗಿ ನಿರ್ವಹಿಸಲು ಪ್ರಯತ್ನಿಸಿದ್ದೇನೆ. ಕಣ್ತಪ್ಪಿ ಇನ್ನೂ ತಪ್ಪುಗಳು ಉಳಿದಿದ್ದರೆ ಭಗವದ್ಭಕ್ತರು ಸಮೀಪದ ವೇದ ಹಾಗೂ ಶಾಸ್ತ್ರವಿದ್ವಾಂಸರಲ್ಲಿ ತಿಳಿದು ಮುಂದುವರಿಯುವುದು ಉತ್ತಮವೆಂದು ನನ್ನ ಅಭಿಪ್ರಾಯ. ನಾನು ತಿಳಿಯುವ ಹಾಗೆ ಈ ಮಂತ್ರಗಳು ಕೇವಲ ಸ್ತುತಿಸಲು ಮಾತ್ರ ಇರುವವು. ಹೋಮಕ್ಕೆ ಉಪಯೋಗಿಸುವುದು ಅವರವರ ನಂಬಿಕೆಗೆ

ಬಿಟ್ಟದ್ದು. ಹೋಮದಲ್ಲಿ ಉಪಯೋಗಿಸುವಾಗ ಸ್ವರವಿದ್ದರೆ ಹೇಳುವವರಿಗೂ ಕೇಳುವವರಿಗೂ ಅಮಿತಾನಂದವಾಗುವುದು ಅನುಭವವೇದ್ಯವಾಗಿದೆ. ಸ್ವರವಿಲ್ಲದೆ ಹೇಳುವುದು ತುಂಬಾ ಕಷ್ಟವೂ ಶ್ರಮದಾಯಕವೂ ಹೌದು. ಏಕೆಂದರೆ ಈ ಮಂತ್ರಗಳಲ್ಲಿ ಸುಮಾರು ೯೬೦ಕ್ಕೂ ಹೆಚ್ಚು ಮಂತ್ರಗಳು ಋಗ್ವೇದ ಮಂತ್ರಗಳೇ ಆಗಿದ್ದು ಹೆಚ್ಚಿನ ಜನರಿಗೆ ಸಸ್ವರವಾಗಿಯೇ ಉಚ್ಚರಿಸಲು ಅನುಕೂಲವಾಗುತ್ತವೆ. ಇನ್ನು ವೇದ ತಿಳಿಯದವರಿಗೆ ಅಥವಾ ವೇದಶ್ರವಣಮಾತ್ರ ಮಾಡಿದವರಿಗೆ ಸ್ವರವಿಲ್ಲದೆ ಉಚ್ಚರಿಸುವುದು ಅನುಕೂಲವೆನಿಸಬಹುದೆಂದು ನನ್ನ ಅಭಿಪ್ರಾಯ. ಅಷ್ಟೇ ಅಲ್ಲದೆ ಸಸ್ವರವಾಗಿ ಹೇಳದಿದ್ದರೂ ಋಗ್ವೇದದ ಉಪನಿಷನ್ಮಂತ್ರಗಳನ್ನು ಉದಾತ್ತ ಸಮಾನ ಏಕಶ್ರುತಿಯಲ್ಲಿ ಉಚ್ಚರಿಸುವಂತೆ ಇವುಗಳನ್ನು ಉಚ್ಚರಿಸುವುದು ಹೆಚ್ಚು ಶಾಸ್ತ್ರೀಯವೆನಿಸುತ್ತದೆ. ಸ್ವರ ಬೇಡವೆಂದು ಶ್ಲೋಕ ಹೇಳುವಂತೆ ಹೇಳುವುದು ಅಶಾಸ್ತ್ರೀಯವೆನಿಸುತ್ತದೆ ವೇದಮೂಲವಾಗಿರುವುದರಿಂದ. ಹೀಗೆ ಯಾವರೀತಿಯಿಂದ ನೋಡಿದರೂ ಸಸ್ವರವಾಗಿ ಉಚ್ಚರಿಸುವುದು ಅಬದ್ಧವೆನಿಸಲಾರದಾಗಿರುವುದರಿಂದ ಹಾಗೂ ಪುರೋಹಿತಬಂಧುಗಳಿಗೆ ಅನುಕೂಲವಾಗುವುದರಿಂದಲೂ ಸಸ್ವರವಾಗಿ ಈ ಬೃಹತೀಸಹಸ್ರಗ್ರಂಥವನ್ನು ಮುದ್ರಿಸಲು ಪ್ರಯತ್ನಿಸಿದ್ದೇನೆ. ನನ್ನ ಈ ಪ್ರಯತ್ನ ಈಗಷ್ಟೇ ಆರಂಭವಾದುದಲ್ಲ, ಹೋದ ಪಲಿಮಾರು ಪರ್ಯಾಯದಲ್ಲೇ ಆರಂಭ ವಾಗಿದೆ. ಆಗ ನಾನು ಹಾಕಿದ ಸ್ವರ ಪುಸ್ತಕವನ್ನೇ ಈ ಪುಸ್ತಕಕ್ಕೆ ಆಧಾರವಾಗಿ ಬಳಸಿದ್ದೇನೆ. ಮಂತ್ರಗಳನ್ನು ಯಾವುದನ್ನೂ ವ್ಯತ್ಯಾಸ ಮಾಡಿ ಬಳಸಿಲ್ಲ. ೧೯೯೯ರಲ್ಲಿ ವಿದ್ವಾಂಸರಾದ ಶೇಷಗಿರಿಯಾಚಾರ್ಯರು ಮುದ್ರಿಸಿದ ಬೃಹತೀಸಹಸ್ರಪುಸ್ತಕವೇ ಇದರ ಮೂಲ. ಅದರಲ್ಲಿ ಮುದ್ರಣದೋಷವಿರುವ ಸ್ಥಳಗಳನ್ನು ಗುರುತಿಸಿ ಸರಿ ಮಾಡಲು ಪ್ರಯತ್ನಿಸಿದ್ದೇನೆ. ಸಜ್ಜನರಿಗೆ ಉಪಕಾರವಾದರೆ ನನ್ನ ಪ್ರಯತ್ನ ಸಾರ್ಥಕವೆಂದು ಭಾವಿಸಿದ್ದೇನೆ.

ನನ್ನ ಈ ಪುಸ್ತಕ ಬರೆಯುವ ವಿಷಯದಲ್ಲಿ ನನ್ನ ಧರ್ಮಪತ್ನಿ ಹಾಗೂ ಮಕ್ಕಳು ನನಗೆ ತುಂಬಾ ಉಪಕರಿಸಿ ದೇವರ ಸೇವೆಗೈದಿದ್ದಾರೆ. ಪುಸ್ತಕಪ್ರಕಟಣೆ ಮಾಡುವಲ್ಲಿ ಸಜ್ಜನರಾದ ನಮ್ಮ ಆತ್ಮೀಯ ಶ್ರೀ ನವೀನಚಂದ್ರ ಮುಚ್ಚಿಂತಾಯರು, ಕೊಂಚಾಡಿ ಮುಖ್ಯಕಾರಣರಾಗಿದ್ದಾರೆ. ಮಂಗಳೂರಿನ ಶ್ರೀನಿವಾಸ ಸಮೂಹ ವಿದ್ಯಾಸಂಸ್ಥೆಗಳ ಮತ್ತು ಹೊಟೇಲ್ ಶ್ರೀನಿವಾಸದ ಮಾಲಕರೂ ಧರ್ಮಕರ್ಮಗಳಲ್ಲಿ ಆಸಕ್ತರೂ ಶ್ರದ್ಧಾವಂತರೂ ಪರೋಪಕಾರಿಗಳೂ ಆದ ಶ್ರೀ ರಾಘವೇಂದ್ರ ರಾಯರು ಹಾಗೂ ಅವರ ಧರ್ಮಪತ್ನಿ ಶ್ರೀಮತಿ ವಿಜಯಲಕ್ಷ್ಮೀ ಆರ್. ರಾವ್ ಮತ್ತು ಮಕ್ಕಳು ಯಾವುದೇ ಪ್ರಚಾರವನ್ನೂ ಬಯಸದೆ ನಿಃಸ್ವಾರ್ಥವಾಗಿ ಈ ಅಮೂಲ್ಯಗ್ರಂಥ ಪ್ರಕಾಶನಕ್ಕೆ ಸಂಪೂರ್ಣವಾಗಿ ಆರ್ಥಿಕ ಸಹಾಯವನ್ನಿತ್ತು ಹರಿಗುರುಗಳ ಕೃಪೆಗೆ ಪಾತ್ರರಾಗಿದ್ದಾರೆ.

ಕಾಪು ಕಲ್ಯದ ಯುವವಿದ್ವಾಂಸರಾದ ವಿದ್ಯಾವಿನಯಗಳಿಂದ ಸದಾ ಭೂಷಿತ ರಾದ ನಮಗೆ ಆತ್ಮೀಯರೂ ಆದ ಅಶೋಕಾಚಾರ್ಯರು ತಮ್ಮ ಬರವಣಿಗೆಯಿಂದ ಈ ಗ್ರಂಥದ ಮೌಲ್ಯವನ್ನು ಹೆಚ್ಚಿಸಿ ನಮಗೆ ಹಾಗೂ ಓದುಗರಿಗೆ ತುಂಬಾ ಉಪಕರಿಸಿದ್ದಾರೆಂದು ಹೇಳಲು ಸಂತೋಷಿಸುತ್ತೇನೆ.

ನನ್ನೀ ಗ್ರಂಥವು ಬಿಡುಗಡೆ ಮಾಡುವಲ್ಲಿ ಪ್ರದೀಪ ಕಲ್ಕೂರರೂ ನಿಸ್ವಾರ್ಥವಾಗಿ ಹಲವು ವಿಧಗಳಿಂದ ಸಹಕರಿಸಿರುವುದನ್ನೂ ಈ ಸಂದರ್ಭದಲ್ಲಿ ತಿಳಿಸಬಯಸುತ್ತೇನೆ.

ಎಲ್ಲರ ಸಹಾಯದಿಂದ ಹೊರಬರುತ್ತಿರುವ ಈ ಅಪೂರ್ವಗ್ರಂಥವು ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾಗಲಿ. ಗರುಡಗಮನಶ್ರೀಕರಮೂರ್ತಿ ಶ್ರೀಕೃಷ್ಣಮುಖ್ಯಪ್ರಾಣದೇವರ ಹಾಗೂ ಗುರುಗಳ ಪ್ರೀತಿಗೆ ಪಾತ್ರವಾಗಲೆಂದು ನನ್ನ ಇಷ್ಟದೇವರಾದ ಮಧ್ವೇಶಕೃಷ್ಣನಲ್ಲಿ ಸವಿನಯ ಭಕ್ತಿಯಿಂದ ಪ್ರಾರ್ಥಿಸುವೆ.

॥ ಹರಿಃಓಂ ತತ್ಸತ್ ॥
॥ ಶ್ರೀಕೃಷ್ಣಾರ್ಪಣಮಸ್ತು ॥

**– ವಿದ್ವಾನ್ ವೇದಮೂರ್ತಿ ಡಾ। ಕದ್ರಿ ಪ್ರಭಾಕರ ಅಡಿಗ**
'ಮಧ್ವೇಶ ನಿಲಯ', ಕದ್ರಿ, ಮಂಗಳೂರು.

# ಮುನ್ನುಡಿ

ಲೇ: ಕಲ್ಯ ಅಶೋಕ ಆಚಾರ್ಯ
'ಜ್ಯೋತಿರ್ಮಂದಿರಮ್' ಕಲ್ಯ, ಕಾಪು

**'ಧ್ರಿಯತೇ ಅನೇನ ಅಧಃ ಪತನ್ ಪುರುಷಃ ಇತಿ ಧರ್ಮಃ'** ನಮ್ಮನ್ನೆಲ್ಲ ಕಾಪಾಡುತ್ತಿರುವುದು ಧರ್ಮ. ಆ ಧರ್ಮಕ್ಕೆ ಮೂಲವಾದುದು ವೇದ. ಆ ವೇದಗಳನ್ನು ನೀಡಿದವರು ದೇವರು. ನೋಡಿದವರು ಋಷಿಗಳು. ಅಧ್ಯಯನ ದೊಂದಿಗೆ ಮುಂದುವರಿಸಬೇಕಾದವರು ಋಷಿಪರಂಪರೆಯವರಾದ ನಾವೆಲ್ಲರೂ.

ಈ ವೇದಮಂತ್ರಗಳು ಹುಟ್ಟಿಸುವ ದೈವೀಕಂಪನ, ಸ್ವರಸಹಿತವಾದ ಉಚ್ಚಾರಣಾ ಕ್ರಮ, ಅಖಂಡ ಭಾರತದಲ್ಲಿ ಇಂದಿಗೂ ಏಕರೂಪವಾಗಿರುವ ಶ್ರುತಿಪಾಠ ಆಶ್ಚರ್ಯ ಹುಟ್ಟಿಸುವಂಥದ್ದು. ಈ ವೈಶಿಷ್ಟ್ಯಗಳ ಒಂದು ಸ್ರೋತಸ್ಸು ವೈದಿಕ ಛಂದಃಶಾಸ್ತ್ರ. ವೈದಿಕಛಂದಸ್ಸುಗಳಲ್ಲಿ ಮಧ್ಯದ್ದಾಗಿ ಪರಿಗಣಿತವಾಗಿರುವ ಬೃಹತೀಛಂದಸ್ಸಿನ ಸಹಸ್ರ ರೂಪಗಳನ್ನು ಕಂಡು ಆರಾಧಿಸುವ ವಿಶೇಷ ವಿಧಾನ ಬೃಹತೀಸಹಸ್ರ.

**'ಆಸ್ಯ ಜಾನಂತೋ ನಾಮ ಚಿದ್ವಿವಕ್ತನ'** ಎಂದು ವೇದವು ನಾಮಸ್ಮರಣೆಯನ್ನು ಅರ್ಥಜ್ಞಾನದೊಂದಿಗೆ ಮಾಡಬೇಕೆಂದು ಸೂಚಿಸುತ್ತದೆ.

**ವಿಷ್ಣೋಃ ಸಹಸ್ರನಾಮ್ನಸ್ತು ಯತ್ತದ್ ರೂಪಸಹಸ್ರಕಮ್ ।**
**ಬೃಹತೀಸಹಸ್ರಮೇತಚ್ಚ ತದ್ ನಕ್ತಿ ಹಿ ಪೃಥಕ್ ಪೃಥಕ್ ।**
**ಪೃಥಕ್ ಪೃಥಕ್ ಹಿ ನಾಮಾರ್ಥಾ ಋಚ ಏತಾಃ ಪ್ರಕೀರ್ತಿತಾಃ ॥**

ಎಂದು ಶ್ರೀಮನ್ಮಧ್ವಾಚಾರ್ಯರು ಐತರೇಯಭಾಷ್ಯದಲ್ಲಿ ವಿಷ್ಣುಸಹಸ್ರನಾಮದ ಪ್ರತಿನಾಮದ ಅರ್ಥವನ್ನು ಬೃಹತೀಸಹಸ್ರದ ಋಕ್ಕುಗಳು ವಿವರಿಸುತ್ತವೆಂದು ತಿಳಿಸುತ್ತಾರೆ.

'ವಿಷ್ಣೋಃ ಸಹಸ್ರನಾಮಾಪಿ ನಿರಂತರಶತಾರ್ಥಕಮ್' ವಿಷ್ಣುಸಹಸ್ರನಾಮದ ಪ್ರತಿನಾಮವೂ ನೂರು ವಿಧದಲ್ಲಿ ಅರ್ಥನಿರ್ವಾಚಕ ಎಂಬ ಮಾತು ಮತ್ತು 'ಋಷಿಭಿಃ ಪರಿಗೀತಾನಿ ತಾನಿ ವಕ್ಷ್ಯಾಮಿ ಭೂತಯೇ ।' ಋಷಿಗಳು ಕಂಡು ತಿಳಿಸಿದ ವಿಷ್ಣುಸಹಸ್ರನಾಮವನ್ನು ನಾನು ಹೇಳುತ್ತೇನೆ ಎಂಬ ಭೀಷ್ಮಾಚಾರ್ಯರ ಮಾತು ಕೂಡ ಈ ವಿಷ್ಣುಸಹಸ್ರನಾಮವು ಇತರ ಸಹಸ್ರನಾಮಗಳಂತಲ್ಲದೆ ಆರ್ಷೇಯವೂ ವೇದಪ್ರತಿಪಾದ್ಯವೂ ಆಗಿದೆ ಎಂಬುದನ್ನೇ ಸೂಚಿಸುತ್ತದೆ.

'ಗಾಯತ್ರೀ ಬೃಹತೀ ಚೈವ ತಾಃ ಸರ್ವಾ ಗರುಡಸ್ತಥಾ ।'
ಅಭಿಮಾನೀ ಬೃಹತ್ಯಾಸ್ತು ವಾಯುರೇವ ಯತಃ ಪ್ರಭುಃ ।
ತಸ್ಮಾದೇಷಾಂ ಛಂದಸಾಂ ಹಿ ವರಿಷ್ಠಾ ಬೃಹತೀ ಸ್ಮೃತಾ ॥
ಅತಿಪ್ರಿಯತ್ವಾತ್ ಭಗವಾನ್ ಪುನರಪ್ಯಾಹ ಕೌಶಿಕಮ್ ।
ತೃತೀಯಂ ಚ ಶಶಂಸಾಸೌ ವಿಷ್ಣೋರನ್ನಂ ಪ್ರಕಲ್ಪಯತ್ ॥

ಎಂದು ಶ್ರೀಮದಾಚಾರ್ಯರು ಋಗ್ಭಾಷ್ಯ ಮತ್ತು ಐತರೇಯಭಾಷ್ಯಗಳಲ್ಲಿ ಬೃಹತೀಛಂದಸ್ಸಿಗೆ ಲಕ್ಷ್ಮೀದೇವಿ, ವಾಯುದೇವರು ಮತ್ತು ಗರುಡದೇವರು ಅಭಿಮನ್ಯರಾಗಿದ್ದು ಛಂದಸ್ಸುಗಳಲ್ಲಿ ಬೃಹತೀಛಂದಸ್ಸು ಶ್ರೇಷ್ಠವೆಂದು ತಿಳಿಸುತ್ತಾರೆ. ಪರಮಾತ್ಮನಿಗೆ ಅತಿಪ್ರಿಯವಾದ್ದರಿಂದ ಇಂದ್ರನಲ್ಲಿ ಆವಿಷ್ಟರಾದ ವಿಶ್ವಾಮಿತ್ರರಿಂದ ಈ ಮಂತ್ರಸಮುದಾಯವನ್ನು ದೇವರು ಮೂರು ಬಾರಿ ಹೇಳಿಸಿ ಅನ್ನವಾಗಿ ಸ್ವೀಕರಿಸಿದರು ಎನ್ನುವ ವಿಶಿಷ್ಟ ಆಖ್ಯಾನ ಇಲ್ಲಿದೆ.

ಇತರ ಛಂದಸ್ಸುಗಳನ್ನು ವಿಹರಣಕ್ರಮದಿಂದ ಬೃಹತೀಕರಣಗೊಳಿಸುವ ವಿಧಾನ ವೇದದಲ್ಲಿ ಸೂಚಿತವಾಗಿದೆ. 'ತದ್ ಯಥಾಽಯಮಾತ್ಮಾ ಸರ್ವತಃ ಶರೀರೈಃ ಪರಿವೃತ ಏವಮೇವ ಬೃಹತೀ ಸರ್ವತಶ್ಛಂದೋಽಭಿಃ ಪರಿವೃತಾ । ಮಧ್ಯಂ ಹ್ಯೇಷಾಮಂಗಾನಾಮಾತ್ಮಾ ಮಧ್ಯಂ ಛಂದಸಾಂ ಬೃಹತೀ', 'ಬೃಹತೀಮಭಿ ಸಂಪಾದಯದೇಷ ವೈ ಕೃತ್ಸ್ನ ಆತ್ಮಾ ಯದ್ ಬೃಹತೀ' (ಐತರೇಯೋಪನಿಷತ್). ಆತ್ಮವು ಶರೀರದ ಅಂಗಾಂಗಗಳಿಂದ ವ್ಯಾಪ್ತವಾಗಿರುವಂತೆ ಬೃಹತೀಛಂದಸ್ಸು ಉಳಿದ ಛಂದಸ್ಸುಗಳಿಂದ ವ್ಯಾಪ್ತವಾಗಿದೆ. ಬೃಹತೀಛಂದಸ್ಸು ಛಂದಸ್ಸುಗಳ ಮಧ್ಯಭಾಗವಾದ್ದರಿಂದ ಇತರ ಛಂದಸ್ಸುಗಳಿಂದ ವಿಹರಣೆಯ ಪ್ರತೀಕ, ಅದಕ್ಕೆ ಪೂರಕವಾದ ಆಖ್ಯಾನಗಳು ಬ್ರಾಹ್ಮಣಾದಿಗಳಲ್ಲಿ ಉಂಟಾಗುವ ಮಂತ್ರಸಮುದಾಯ ಗರುಡಪಕ್ಷಿಯ ಆಕಾರ ಪಡೆಯುವುದನ್ನು ನಿರ್ದಿಷ್ಟವಾಗಿ ಐತರೇಯ ಆರಣ್ಯಕ ತಿಳಿಸುತ್ತದೆ.

ತೃಚೋತ್ತರಸೂಕ್ತದಿಂದ ಪಕ್ಷ್ಯಾಕಾರವಾದ ನಿಷ್ಕೇವಲ್ಯಶಸ್ತ್ರದ ಮಧ್ಯಭಾಗವು ನಿರ್ಮಾಣವಾಗುತ್ತದೆ. ಉಷ್ಣಿಕ್ ಛಂದಸ್ಕಮಂತ್ರಗಳನ್ನು ಬೃಹತೀಗೊಳಿಸಿ ಗರುಡ ಪಕ್ಷಿಯ ಕುತ್ತಿಗೆಯ ಭಾಗ, ಗಾಯತ್ರೀಛಂದಸ್ಕಮಂತ್ರಗಳಿಂದ ಬೃಹತೀ ಗರುಡನ ಶಿರೋಭಾಗ, ವಿರಾಟ್ ಛಂದಸ್ಸಿನಿಂದ ರೆಕ್ಕೆಗಳ ಮೂಲಭಾಗ, ಬೃಹತ್‌ಸಾಮರೂಪದ ೧೦೧ ಋಕ್ಕುಗಳಿಂದ ಎಡ ರೆಕ್ಕೆ, ರಥಂತರರೂಪದ ೧೦೦ ಋಕ್ಕುಗಳಿಂದ ಬಲ ರೆಕ್ಕೆ, ೨೧ ದ್ವಿಪದಿಗಳಿಂದ ಪುಚ್ಛಭಾಗ –ಇದು ಬೃಹತೀಸಹಸ್ರದ ಮಂತ್ರ ವಿಭಾಗಗಳಿಂದ ನಿರ್ಮಾಣವಾಗುವ ಗರುಡರೂಪದ ವಿವರಣೆ.

'ಛಂದೋಮಯೇನ ಗರುಡೇನ ಸಮುಹ್ಯಮಾನಃ' ಎಂದು ಶ್ರೀಮದ್ಭಾಗವತದಲ್ಲಿ ತಿಳಿಸಿರುವುದರ ವೈದಿಕ ರೂಪಕವಿದು. ಛಂದೋಮಯನಾದ ಗರುಡವಾಹನ

ರೂಪನಾಗಿ ಮಂತ್ರಾತ್ಮಕವಾದ ಮಹಾವಿಷ್ಣುವನ್ನು ನಮ್ಮಲ್ಲಿಗೆ ತರುವ ಸುಂದರ ಅನುಸಂಧಾನ ಇಲ್ಲಿದೆ.

**ಬೃಹತೀಸಹಸ್ರವರ್ಣಾನಾಮಪಿ ಧ್ಯಾತ್ವಾಽಖಿಲಾನ್ಯಪಿ ।**
**ಶತವರ್ಷ ಹರಿಧ್ಯಾನಫಲಮಾಪ್ನೋತಿ ಪೂರುಷಃ ॥**

ಸ್ವರವ್ಯಂಜನಾತ್ಮಕ ಒಟ್ಟು ೭೨,೦೦೦ ಅಕ್ಷರಗಳನ್ನು ಒಳಗೊಂಡು ನಮ್ಮ ೧೦೦ ವರ್ಷಗಳ ಆಯುಷ್ಯದ ದಿವಾರಾತ್ರಿಗಳನ್ನು ಇದು ಸೂಚಿಸುತ್ತದೆ. ಬೃಹತೀ ಸಹಸ್ರವನ್ನು ಅಕ್ಷರಾತ್ಮಕವಾಗಿ ಧ್ಯಾನ ಮಾಡುವುದರಿಂದ ೧೦೦ ವರ್ಷ ಹರಿಧ್ಯಾನ ಮಾಡಿದ ಫಲ ಲಭಿಸುತ್ತದೆ.

ಷಷ್ಟಿಪೂರ್ತಿ ಇತ್ಯಾದಿ ಸಂದರ್ಭಗಳಲ್ಲಿ ಇದರ ಆರಾಧನೆ ನಡೆಸುವುದು, ನಿತ್ಯ ವಿಷ್ಣುಸಹಸ್ರನಾಮಪಾರಾಯಣ ಮಾಡುವವರು ಇದರ ಹೋಮ ನಡೆಸುವುದು ಜೀವನಕ್ಕೆ ಸಾರ್ಥಕ್ಯವನ್ನು ನೀಡುತ್ತದೆ.

ಚತುರ್ವೇದವಿದರಾದ ಶ್ರೀ ಕದ್ರಿ ಪ್ರಭಾಕರ ಅಡಿಗರು ಬಹು ಪರಿಶ್ರಮವನ್ನೂ ಚಿಕಿತ್ಸಕಬುದ್ಧಿಯನ್ನೂ ಅಪೇಕ್ಷಿಸುವ ಹಲವು ಗ್ರಂಥಗಳನ್ನು ಈಗಾಗಲೇ ರಚಿಸಿದ್ದಾರೆ. ಈ ಬೃಹತೀಸಹಸ್ರ ಗ್ರಂಥವನ್ನೂ ಸಹೃದಯರು ಚೆನ್ನಾಗಿ ಸ್ವೀಕರಿಸಿ ಇನ್ನಷ್ಟು ಸಾರಸ್ವತಸೇವೆ ಅವರಿಂದ ನಡೆಯಲಿ ಎಂದು ಹಾರೈಸುತ್ತೇನೆ.

**– ಕಲ್ಯ ಅಶೋಕ ಆಚಾರ್ಯ**

# ಬೃಹತೀಸಹಸ್ರಹೋಮವಿಧಾನ

ಲೇ: ಕಲ್ಯ ಅಶೋಕ ಆಚಾರ್ಯ, ಕಾಪು.

## ಪ್ರತಿಪಾದ್ಯ ಭಗವದ್ರೂಪಗಳು

ಬೃಹತೀಸಹಸ್ರವು ಶ್ರೀಮಹಾವಿಷ್ಣುವಿನ ಸಹಸ್ರರೂಪಗಳನ್ನು ಆರಾಧಿಸುವ ವಿಧಾನವಾದ್ದರಿಂದ ಸಹಸ್ರಜಪ, ಸಹಸ್ರ ಅರ್ಚನೆ, ಸಹಸ್ರ ತರ್ಪಣ, ಸಹಸ್ರ ಬ್ರಾಹ್ಮಣಾರಾಧನೆಗಳೊಂದಿಗೆ ಸಹಸ್ರ ಆಹುತಿ ನೀಡುವುದು ಉತ್ತಮಪಕ್ಷವಾಗುತ್ತದೆ. ಬೃಹತೀಸಹಸ್ರದ ಮಂತ್ರಗಳಿಂದ ಪ್ರತ್ಯೇಕ ಆವಾಹನೆಯೊಂದಿಗೆ ತತ್ತತ್ ಮಂತ್ರಸೂಚಿತ ಸಹಸ್ರನಾಮಪ್ರತಿಪಾದ್ಯ ವಿಶ್ವಾದಿರೂಪಗಳನ್ನು ಪ್ರತ್ಯೇಕವಾಗಿ ಅನುಸಂಧಾನ ಮಾಡಿಕೊಳ್ಳಲು ಅನುಕೂಲವಾಗುವಂತೆ ಸಹಸ್ರ ಕಲಶಗಳನ್ನಿಡುವುದು ಉತ್ತಮೋತ್ತಮ ಪಕ್ಷ. ಅಜಾದಿ ೫೧ ದೇವತೆಗಳನ್ನು ಆರಾಧಿಸುವಂತೆ ೫೨ ಕಲಶಗಳನ್ನು, ಮತ್ಸ್ಯಾದಿ ೧೦ ರೂಪಗಳನ್ನು ಆರಾಧಿಸುವಂತೆ ೧೧ ಕಲಶಗಳನ್ನು, ನಾರಾಯಣ-ಅನಿರುದ್ಧ-ಸಂಕರ್ಷಣ-ವಾಸುದೇವ-ಪ್ರದ್ಯುಮ್ನ ರೂಪಗಳನ್ನು ಆರಾಧಿಸುವಂತೆ ೫ ಕಲಶಗಳನ್ನು, ಮಹಾವಿಷ್ಣುರೂಪದ ೧ ಕಲಶವನ್ನು ಇಟ್ಟು ಆರಾಧನೆ ನಡೆಸಬಹುದು. ಐತರೇಯಭಾಷ್ಯದಲ್ಲಿ ಶ್ರೀಮದಾಚಾರ್ಯರು ತಿಳಿಸಿದಂತೆ-

> ಮತ್ಸ್ಯಕೂರ್ಮಕ್ರೋಡಸಿಂಹ ವಟುಭಾರ್ಗವರಾಘವಾಃ ।
> ಕೃಷ್ಣಬುದ್ಧೌ ಚ ಕಲ್ಕೀತಿ ರೂಪಾಣಾಂ ದಶಕಂ ಹರೇಃ ॥
>
> ಪಂಚಭೇದವಿಭಿನ್ನೇನ ಹ್ಯೃಕ್ಸಹಸ್ರೇಣ ಶಸ್ಯತೇ ।
> ರೂಪಾಣಾಂ ಪಂಚಕಂ ಪೂರ್ವಮಪರಂ ಪಂಚಕಂ ಹರೇಃ ॥

ಬೃಹತೀಸಹಸ್ರದ ಪೂರ್ವ ಪಂಚಕಭಾಗದಲ್ಲಿ ನಾರಾಯಣ ಮತ್ತು ಮತ್ಸ್ಯ ಪರಶುರಾಮರೂಪಗಳು, ೨ನೆಯದಾದ ಗಾಯತ್ರೀತೃಚಾಶೀತಿಯಲ್ಲಿ ವಾಸುದೇವ ಮತ್ತು ಕೂರ್ಮರಾಮರು, ಬಾರ್ಹತತೃಚಾಶೀತಿಯಲ್ಲಿ ಸಂಕರ್ಷಣ ಮತ್ತು ವರಾಹ ಕೃಷ್ಣರೂಪಗಳು, ಔಷ್ಣಿಹೀತೃಚಾಶೀತಿಯಲ್ಲಿ ಪ್ರದ್ಯುಮ್ನ ಮತ್ತು ನರಸಿಂಹಬುದ್ಧ ರೂಪಗಳು, ಉತ್ತರಭಾಗದಲ್ಲಿ ಅನಿರುದ್ಧ ಮತ್ತು ವಾಮನಕಲ್ಕಿರೂಪಗಳು, ಉದ್ದೇಶ ತ್ಯಾಗದಲ್ಲಿ ವಿಶೇಷವಾಗಿ ಅನುಸಂಧೇಯರೂಪಗಳಾಗಿವೆ. ಬೃಹತೀಸಹಸ್ರದ ಪ್ರತಿ ಆಹುತಿಯಲ್ಲಿಯೂ ಯಜಮಾನರಲ್ಲಿ ಅಥವಾ ಋತ್ವಿಜರಲ್ಲಿ ಒಬ್ಬರು ವಿಷ್ಣುಸಹಸ್ರ ನಾಮದ ತತ್ತತ್ ನಾಮನಮನದೊಂದಿಗೆ ಸಾಷ್ಟಾಂಗ ನಮಸ್ಕರಿಸುವುದು ಶ್ರೇಷ್ಠ.

> ವೃತ್ರಂ ಹತ್ವಾ ಮಹೇಂದ್ರಸ್ತು ಮಹೇಂದ್ರತ್ವಾಭಿಪತ್ತಯೇ ।
> ಮಹಾವ್ರತಂ ಕರ್ಮಚಕ್ರೇ ಹೌತ್ರಂ ಚಕ್ರೇಽಥಕೌಶಿಕಃ ॥

ಎಂದು ಶ್ರೀಮದಾಚಾರ್ಯರು ಐತರೇಯಭಾಷ್ಯದಲ್ಲಿ ಬ್ರಹ್ಮಾಂಡವಚನವನ್ನು ಉದ್ಧರಿಸುತ್ತಾರೆ. ಇಂದ್ರನು ವೃತ್ರವಧೆಯ ಅನಂತರ ನಡೆಸಿದ ಈ ಮಹಾವ್ರತದಲ್ಲಿ ವಿಶ್ವಾಮಿತ್ರರು ಇಂದ್ರನಲ್ಲಿ ಆವಿಷ್ಟರಾಗಿ ಬೃಹತೀಸಹಸ್ರವನ್ನು ನುಡಿದರು. ಈ ಮಂತ್ರವು ಗರುಡಪಕ್ಷಿಯ ಆಕಾರದಲ್ಲಿದೆಯೆಂದು ಐತರೇಯ ಆರಣ್ಯಕ ತಿಳಿಸುತ್ತದೆ.

'ಅಥಾತೋ ದಕ್ಷಿಣಃ ಪಕ್ಷಃ ಸೋಽಯಂ ಲೋಕಃ ಸೋಽಯಮಗ್ನಿಃ..... ಅಥಾತ ಉತ್ತರಃ ಪಕ್ಷಃ ಸೋಽಸೌ ಲೋಕಃ ಸೋಽಸಾವಾದಿತ್ಯಃ ...... ಅಥಾತಃ ಪುಚ್ಛಂ ತಾ ಏಕವಿಂಶತಿರ್ದ್ವಿಪದಾ.... ಸುಪರ್ಣಸ್ಯ ಪತ್ರಾಣಿ ಭವಂತಿ' ಇತ್ಯಾದಿಯಾಗಿ ಗರುಡಪಕ್ಷಿಯ ದೇಹ, ಶಿರಸ್ಸು, ಎರಡು ರೆಕ್ಕೆಗಳು ಮತ್ತು ಪುಚ್ಛ ಈ ರೀತಿಯಾಗಿ ಐದು ದೇಹಭಾಗಗಳು ನಿರ್ದಿಷ್ಟ ಐದು ಮಂತ್ರಸಮೂಹಗಳಿಂದ ನಿರ್ಮಾಣವಾಗುತ್ತದೆಯೆಂಬ ವಿವರಣೆಯಿದೆ. ಇದಕ್ಕನುಸಾರವಾಗಿ ಹೋಮಕುಂಡವನ್ನು ಅಥವಾ ವೇದಿಯನ್ನು ಗರುಡಪಕ್ಷಿಯ ಆಕಾರದಲ್ಲಿ ನಿರ್ಮಿಸಿ 'ಛಂದೋಮಯೇನ ಗರುಡೇನ ಸಮುಹ್ಯಮಾನಃ' ಎಂಬ ಭಾಗವತದ ಮಾತನ್ನು ನೆನಪಿಸುವಂತೆ ಗರುಡಾರೂಢನಾದ ಮಹಾವಿಷ್ಣುವು ಮಂತ್ರಮಯನಾಗಿ ಯಜ್ಞಕುಂಡದಲ್ಲಿ ಸನ್ನಿಹಿತನಾಗುತ್ತಿರುವುದನ್ನು ಅನುಸಂಧಾನ ಮಾಡಿಕೊಳ್ಳುವುದು ಉತ್ತಮಪಕ್ಷ.

'ತಾ ಅಭಿಸಂಪದ್ಯಂತೇ ಬೃಹತೀಂ ಛಂದೋಽಮೃತಂ ದೇವಲೋಕಮೇಷಃ....' ಎಂದು ಎಲ್ಲ ಛಂದಸ್ಸುಗಳ ಮಂತ್ರಗಳು ಸೇರಿ ಬೃಹತೀರೂಪದ ಗರುಡಾಕಾರ ನಿರ್ಮಾಣವಾಗುವುದರಿಂದ ಹೋಮಕುಂಡಕ್ಕೆ ಗರುಡದೇವರು ಅಧಿಷ್ಠಾತೃವಾಗುತ್ತಾರೆ. ಐತರೇಯ ಆರಣ್ಯಕ ಹಾಗೂ ಶ್ರೀರಘುನಾಥತೀರ್ಥರ ವ್ಯಾಖ್ಯಾನಗಳನ್ನು ಅವಲಂಬಿಸಿ ಹೋಮಕುಂಡದ ಮತ್ತು ತದ್ರೂಪಮಂತ್ರವಿಭಾಗಗಳ ಒಂದು ಸ್ಥೂಲ ಚಿತ್ರಣ ಇಲ್ಲಿದೆ.



ತತ್ ಶ್ರುತ್ವಾ ತುಷ್ಟಿಮಗಮತ್ ಕೇಶವೋ ವಾಯುಸಂಯುತಃ ।
ಯಸ್ಯಾಭಿಮಾನಿನ್ಯನ್ನಸ್ಯ ಲಕ್ಷ್ಮೀಃ ಸಾ ದೇವತೋತ್ತಮಾ ।
ವಿಶ್ವಾಮಿತ್ರೇಣ ದೃಷ್ಟತ್ವಾತ್ ವೈಶ್ವಾಮಿತ್ರಂ ತದೀರ್ಯತೇ ॥

ಎಂದು ಆಚಾರ್ಯರ ಭಾಷ್ಯವಚನ. ವಿಷ್ಣುದೇವರು, ಲಕ್ಷ್ಮೀದೇವಿ, ಪ್ರಾಣ ದೇವರಿಗೆ ಈ ಹೋಮ ಪ್ರೀತಿಕರ.

ಬೃಹತೀಸಹಸ್ರವು ಶ್ರೌತಶಸ್ತ್ರಮಂತ್ರವಾದ್ದರಿಂದ ಅಗ್ನಿಮುಖದಲ್ಲಿ ಅಳವಡಿಸಿಕೊಳ್ಳ ಬಹುದಾದ ಕೆಲವು ಬ್ರಾಹ್ಮಣವಾಕ್ಯಗಳನ್ನು ಇಲ್ಲಿ ಕೊಟ್ಟಿರುತ್ತೇನೆ.

'ಏತದ್ವೈ ಯಜ್ಞಸ್ಯ ರೂಪಸಮೃದ್ಧಂ ಯದ್ರೂಪ ಸಮೃದ್ಧಂ ಯತ್ಕರ್ಮ ಕ್ರಿಯಮಾಣಮೃಗಭಿವದತಿ ।' ಮಾಡುವ ಕರ್ಮದ ವಿವರವನ್ನು ಸಾಕಲ್ಯದಿಂದ ವಿವರಿಸುವ ಋಕ್ಕುಗಳನ್ನು ಹೇಳಿದರೆ ಅದು ರೂಪಸಮೃದ್ಧಿ. ಇದು ಯಜ್ಞಸಮೃದ್ಧಿಗೆ ಕಾರಣವಾಗುತ್ತದೆ ಎಂದು ಐತರೇಯಬ್ರಾಹ್ಮಣ ತಿಳಿಸುತ್ತದೆ. ನನ್ನ ಪೂಜ್ಯ ಪಿತೃಪಾದರಾದ ಕಲ್ಯ ಗೋಪಾಲ ಆಚಾರ್ಯರು ಅನೇಕ ಬ್ರಾಹ್ಮಣವಾಕ್ಯಗಳನ್ನು ಬಾಯಿಪಾಠವಿಟ್ಟುಕೊಂಡು ಸ್ವಾಂತಃಸುಖಾಯ ಅಗ್ನಿಮುಖಕಾಲದಲ್ಲಿ ವಿನಿಯೋಗಿ ಸುತ್ತಿದ್ದರು. ಅವರ ನೆನಪಿನೊಂದಿಗೆ ಅವರದ್ದಾದ ಈ ಒಂದು ಅಪೂರ್ವ ಸಂಗ್ರಹವನ್ನು ಇಲ್ಲಿ ನೀಡುತ್ತಿದ್ದೇನೆ.

## ಯಜಮಾನನಿಗೆ ದೀಕ್ಷೆ

ಅದ್ಭಿರಭಿಷಿಂಚಂತಿ । ಅಪ್ಸು ಸ್ನಾತಿ ಸಾಕ್ಷಾದೇವ ದೀಕ್ಷಾತಪಸೀ ಅವರುಂಧೇ । ನವನೀತೇನಾಭ್ಯಂಜಂತಿ । ಅಂಜಂತ್ಯೇನಂ । ತೇಜೋ ವಾ ಏತದಕ್ಷ್ಯೋರ್ಯದಾಂಜನಂ ಸತೇಜಸಯೇವೈನಂ ತತ್ಕೃತ್ವಾ ದೀಕ್ಷಯಂತಿ ॥

ತೀರ್ಥೇ ಸ್ನಾತಿ ತೀರ್ಥಮೇವ ಸಮಾನಾನಾಂ ಭವತ್ಯಪೋಽಶ್ನಾತಿ ಅಂತರತ ಏವ ಮೇಧ್ಯೋ ಭವತಿ ॥

ಪವಿತ್ರವಾದ ನೀರಿನಿಂದ ಸ್ನಾನವಿಧಿಯ ಪ್ರಕಾರ ಸ್ನಾನ ಅಥವಾ ಅಭಿಷೇಕ ಮಾಡುವುದರಿಂದ ಬಹಿರಂಗಶುದ್ಧಿ; ಆಚಮನ ಮಾಡುವುದರಿಂದ ಅಂತರಂಗಶುದ್ಧಿ.

## ಯಜಮಾನನಿಗೆ ಮಂತ್ರಶುದ್ಧಿ

ಏಕವಿಂಶತ್ಯಾ ದರ್ಭಪಿಂಜೂಲೈಃ ಪಾವಯಂತಿ । ಪಾವ್ಯಮಾನಸ್ಯ ಯಜಮಾನಸ್ಯ ಜಪಾರ್ಥಾಃ ಮಂತ್ರಾಃ – ಯದ್ದೇವಾ ದೇವಹೇಡನಂ ಇತ್ಯಾದಿ ತ್ವಮಗ್ನೇ ಅಯಾಸಿ ಪರ್ಯಂತ ಮಂತ್ರಗಳು.

ಮುಷ್ಟೀಕುರುತೇ । ಮುಷ್ಟೀಕರೋತಿ ವಾಚಂ ಯಚ್ಛತಿ ಯಜ್ಞಸ್ಯ ಧೃತ್ಯೈ ॥

## ಕುಂಡಸಂಸ್ಕಾರ

ಉದ್ಧಂತಿ ಯದೇವಾಸ್ಯಾ ಅಮೇಧ್ಯಂ ತದಪಹನ್ತಿ । ಅಪೋ ವೋಕ್ಷತಿ ಶಾನ್ತ್ಯೈ । ಸಿಕತಾನಿ ವಪತಿ । ಏತದ್ವಾ ಅಗ್ನೇರ್ವೈಶ್ವಾನರಸ್ಯ ರೂಪಮ್ । ಯತ್ಸಿಕತಾಃ ಸ್ವೇನೇವೈನꣳ ರೂಪೇಣ ಸಮರ್ಧಯತಿ । ಇನ್ದ್ರಸ್ಯ ವಜ್ರೋಽಸಿ ವಾರ್ತ್ರಘ್ನ ಇತಿ ಸ್ಫ್ಯಂ ಪ್ರಯಚ್ಛಂತಿ । ವಜ್ರೋ ವೈ ಸ್ಫ್ಯಃ ॥

## ಆಸನ

ಅಥ ಹೋತೃಷದನ ಉಪಾವರ್ತತೇ । ಸ ಹೋತೃಷದನಾದೇಕಂ ತೃಣಂ ನಿರಸ್ಯತಿ । ನಿರಸ್ತಃ ಪರಾವಸುರಿತಿ । ಪರಾವಸುರ್ಹ ವೈ ನಾಮಾಸುರಾಣಾꣳಹೋತಾ । ಸ ತಮೇವೈತದ್ಧೋತೃಷದನಾನ್ನಿರಸ್ಯತಿ । ಅಥ ಹೋತೃಷದನ ಉಪವಿಶತಿ । ಇದಮಹಮರ್ವಾವಸೋಸ್ಸದನೇ ಸೀದಾಮೀತಿ । ಅರ್ವಾವಸುರ್ವೈ ನಾಮದೇವಾನಾꣳ ಹೋತಾ । ತಸ್ಯೈವೈತತ್ ಸದನೇ ಸೀದತಿ ॥

## ಪಾತ್ರಾಸಾದನ

ಯದ್ದರ್ಭಪುಂಜೀಲೈಃ ಪವಯತಿ । ತತ್ಸ್ವಿದೇವಾಪ್ನೈತಿ । ತನ್ನಪ್ನೈತಿ । ತ್ರಿಭಿಃ ಪವಯತಿ । ತ್ರಯ ಇಮೇ ಲೋಕಾಃ । ಏಭಿರೇವೈನಂ ಲೋಕೈಃ ಪವಯತಿ । ಅಥೋ ಅಪಾಂ ವಾ ಏತತ್ತೇಜೋ ವರ್ಚಃ । ಯದ್ದರ್ಭಾಃ । ಯದ್ದರ್ಭಪಿಂಜೂಲೈಃ ಪವಯತಿ । ಅಪಾಮೇವೈನಂ ತೇಜಸಾ ವರ್ಚಸಾಽಭಿಷಿಂಚತಿ । ಇಂದ್ರೋ ವೃತ್ರಮಹನ್ । ಸೋಽಪಃ ಅಭ್ಯಮ್ರಿಯತ । ತಾಸಾಂ ಯನ್ಮೇಧ್ಯಂ ಯಜ್ಞಿಯꣳ ಸದೇವಮಾಸೀತ್ । ತದಪೋದ ಕ್ರಾಮತ್ । ತೇ ದರ್ಭಾ ಅಭವನ್ । ಯದ್ದರ್ಭೈರಪ ಉತ್ಪುನಾತಿ । ಯಾ ಏವ ಮೇಧ್ಯಾ ಯಜ್ಞಿಯಾಃ ಸದೇವಾ ಆಪಃ । ತಾಭಿರೇವೈನಾ ಉತ್ಪುನಾತಿ । ದ್ವಾಭ್ಯಾಮುತ್ಪುನಾತಿ । ದ್ವಿಪಾದ್ಯಜಮಾನಃ । ಪ್ರತಿಷ್ಠಿತ್ಯೈ । ದೇವೋ ವಃ ಸವಿತೋತ್ಪುನಾ ತ್ವಿತ್ಯಾಹ । ಸವಿತೃಪ್ರಸೂತ ಏವೈನಾ ಉತ್ಪುನಾತಿ । ಅಚ್ಛಿದ್ರೇಣ ಪವಿತ್ರೇಣೇತ್ಯಾಹ । ಅಸೌ ವಾ ಆದಿತ್ಯೋಽಚ್ಛಿದ್ರಂ ಪವಿತ್ರಂ ತೇನೈವೈನಾ ಉತ್ಪುನಾತಿ । ವಸೋಸ್ಸೂರ್ಯಸ್ಯ ರಶ್ಮಿಭಿರಿತ್ಯಾಹ । ಪ್ರಾಣಾ ವಾ ಆಪಃ । ಪ್ರಾಣಾ ವಸವಃ । ಪ್ರಾಣಾ ರಶ್ಮಯಃ । ಪ್ರಾಣೈರೇವ ಪ್ರಾಣಾನ್ ಸಂಪೃಣಕ್ತಿ ।

ಅದ್ಭಿರ್ಹ್ಯೇವ ಹವೀꣳಷಿ ಪ್ರೋಕ್ಷತಿ ಬ್ರಹ್ಮಣಾವ ಇಧ್ಮಾಬರ್ಹಿಃ ಪ್ರೋಕ್ಷತಿ ಮೇಧ್ಯಮೇವೈನತ್ ಕರೋತಿ ವೇದಿಂ ಪ್ರೋಕ್ಷತಿ । ಅಥ ಯದ್ವಂದ್ವಂ ದ್ವಂದ್ವಂ ವೈ ವೀರ್ಯಂ ಯದಾ ವೈ ದ್ವೌ ಸꣳರಭೇತೇ । ಅಥ ತದ್ವೀರ್ಯಂ ಭವತಿ ದ್ವಂದ್ವಂ ವೈ ಮಿಥುನಂ ಮಿಥುನಮೇವೈತತ್ ಪ್ರಜನನಂ ಕ್ರಿಯತೇ ।

## ಇಧ್ಮಾ ಬರ್ಹಿಸ್ಸನ್ನಹನ

ಅದಿತ್ಯೈರಾಸ್ನಾಸೀಂದ್ರಾಣ್ಯೈ ಸನ್ನಹನಮ್ । ಪೂಷಾ ತೇ ಗ್ರಂಥಿಂ ಗ್ರಥ್ನಾತು । ಸ ತೇ ಮಾಸ್ಥಾತ್ ॥

## ಬ್ರಹ್ಮ

ದಕ್ಷಿಣತೋ ಬ್ರಹ್ಮಾ ಭವತಿ । ಉತ್ತರತೋ ಹೋತಾ ಭವತಿ । ಅಪ ವಾ ಏತೇಭ್ಯಃ ಪ್ರಾಣಾಃ ಕ್ರಾಮನ್ತಿ ಯೇಽಪೂತಂ ವಹಂತಿ । ದಧಿಕ್ರಾವ್ಣೋ ಅಕಾರಿಷಮಿತಿ ಸುರಭಮತೀ ಮೃಚಂ ವದಂತಿ । ಪ್ರಾಣಾ ವೈ ಸುರಭಯಃ ಪ್ರಾಣಾನೇವಾತ್ಮನ್ ದಧತೇ । ನೈಭ್ಯಃ ಪ್ರಾಣಾ ಅಪಕ್ರಾಮನ್ತಿ । ಆಪೋ ಹಿಷ್ಠಾ ಮಯೋಭುವ ಇತ್ಯದ್ಭಿರ್ಮಾರ್ಜಯನ್ತೇ । ಆಪೋ ವಾ ಸರ್ವಾ ದೇವತಾಃ । ದೇವತಾಭಿರೇವಾತ್ಮಾನಂ ಪವತೇ ॥ ಬ್ರಹ್ಮಾ ವೈ ಯಜ್ಞಸ್ಯ ದಕ್ಷಿಣತ ಆಸ್ತೇ । ಅಭಿಗೋಪ್ತಾಸ ಏತಂ ಭಾಗಂ ಪ್ರತಿವಿದಾನ ಆಸ್ತೇ । ತತ್ ಪ್ರಾಶಿತ್ರಂ ತದಸ್ಮೈ ಪರ್ಯಾಹಾರ್ಷುಃ ತತ್ ಪ್ರಾಶೀದಥ ಯಮಸ್ಮೈ ಬ್ರಹ್ಮಭಾಗಂ ಪರ್ಯಾಹರಂತಿ । ಪ್ರಸ್ಥಾಸ್ಯಾಮೀತ್ಯೋ ತಸ್ಮಾದ್ವಚನೋ ವಿವೃಹಂತಿ । ಬ್ರಹ್ಮ ವಾ ಋತ್ವಿಜಾಂ ಭಿಷಕ್ತಮಃ । ಬೃಹಸ್ಪತಯೇ ಬ್ರಹ್ಮಣ ಇತಿ ಬೃಹಸ್ಪತಿರ್ವೈ ದೇವಾನಾಂ ಬ್ರಹ್ಮಾ ॥

## ಆಜ್ಯಸಂಸ್ಕಾರ

ಧೇನ್ವೈ ವಾ ಏತದ್ರೇತಃ ಯದಾಜ್ಯಮ್ । ಅನಡುಹಸ್ತಂಡುಲಾಃ । ಮಿಥುನಮೇವಾವ ರುಂಧೇ । ಘೃತೇ ಭವತಿ ಯಜ್ಞಸ್ಯಾವಾಕ್ಷಾಂತತ್ವಾಯ । ಘೃತವತೀಭಿರಾದಧಾತಿ । ಏತದ್ವಾ ಅಗ್ನೇಃ ಪ್ರಿಯಂ ಧಾಮ । ಯದ್ ಘೃತಮ್ । ಪ್ರಿಯೇಣೈವೈನಂ ಧಾಮ ಸಮರ್ಧಯತಿ । ಅಥೋ ತೇಜಸಾ । ರುದ್ರೋ ವಾ ಏಷ ಯದಗ್ನಿಃ । ಪತ್ನೀ ಸ್ಥಾಲೀ । ಯನ್ಮಧ್ಯೇಽಗ್ನೇರಧಿ ಶ್ರಯೇತ್ । ರುದ್ರಾಯ ಪತ್ನೀಮಪಿ ದದ್ಯಾತ್ । ಪ್ರಮಾಯುತಾ ಸ್ಯಾತ್ । ಉದಿಚೋಽಂಗಾರಾನ್ನಿರುಹ್ಯಾಧಿಶ್ರಯತಿ । ಪತ್ನಿಯೈ ಗೋಪೀಥಾಯ ॥

## ಪರ್ಯಗ್ನಿಕರಣ

ಪರ್ಯಗ್ನಿಕರೋತಿ ರಕ್ಷಸಾಮಪಹತ್ಯೈ । ತ್ರಿಃಪರ್ಯಗ್ನಿಕರೋತಿ ತ್ರ್ಯಾವೃದ್ಧಿಯಜ್ಞಃ । ಅಥೋ ಮೇಧ್ಯತ್ವಾಯ । ಯತ್ಪ್ರಾಚೀನಮುದ್ವಾಸಯೇತ್ । ಯಜಮಾನꣳ ಶುಚಾರ್ಪಯೇತ್ । ಯದ್ದಕ್ಷಿಣಾ ಪಿತೃದೇವತ್ಯꣳ ಸ್ಯಾತ್ । ಯತ್ ಪ್ರತ್ಯಕ್ ಪತ್ನೀꣳ ಶುಚಾರ್ಪಯೇತ್ । ಉದೀಚೀನಮುದ್ವಾಸಯೇತ್ । ಏಷಾ ವೈ ದೇವಮನುಷ್ಯಾಣಾಂ ವರ್ತ್ಮ ಕರೋತಿ ಯಜ್ಞಸ್ಯ ಸಂತತ್ಯೈ । ನಿಷ್ಟಪತಿ । ಉಷ್ಣೈನ ತತ್ಸ್ಪೃಣಾತಿ । ತಂ ಪರ್ಯಗ್ನಿ ಕರೋತಿ ನೇದೇನಂ ನಾಷ್ಟ್ರಾ ರಕ್ಷಾꣳಸಿ ಪ್ರಮೃಶಾನಿತ್ಯಗ್ನಿರ್ಹಿ ರಕ್ಷಸಾಮಪಹನ್ತಾ ।

## ಬರ್ಹಿಸ್ತರಣ

ಬರ್ಹಿಸ್ತೃಣಾತಿ ಪ್ರಜಾ ವೈ ಬರ್ಹಿಃ ಪೃಥಿವೀ ವೇದಿಃ ಪ್ರಜಾ ಏವ ಪೃಥಿವ್ಯಾಂ ಪ್ರತಿಷ್ಠಾಪಯತಿ ॥

## ಸ್ರುಕ್‌ಸ್ರುವಸಮ್ಮಾರ್ಜನೇ

ಪ್ರತ್ಯುಷ್ಟಂ ರಕ್ಷಃ ಪ್ರತ್ಯುಷ್ಟಾ ಅರಾತಯಃ । ನಿಷ್ಟಪ್ತಂ ರಕ್ಷೋ ನಿಷ್ಟಪ್ತಾ ಅರಾತಯಃ । ರಕ್ಷಸಾಮಪಹತ್ಯೈ । ಅಗ್ನೇರ್ವರ್ಸ್ತೇಜಷ್ಠೇನ ತೇಜಸಾ ನಿಷ್ಟಪಾಮೀತ್ಯಾಹ । ಸ್ರುಚಸ್ಸಮಾರ್ಷ್ಟಿ । ಸ್ರುವಮಗ್ರೇ । ಯಂ ಕಾಮಯೇತ ವರ್ಷುಕಃ ಪರ್ಜನ್ಯಃ ಸ್ಯಾದಿತಿ । ಅಗ್ರತಃ ಸಂಮೃಜ್ಯಾತ್ ವೃಷ್ಟಿಮೇವ ನಿಯಚ್ಛತಿ । ಅವಾಚೀನಾಗ್ರಾಹಿ ವೃಷ್ಟಿಃ । ಯದಿ ಕಾಮಯೇ ತಾವರ್ಷುಕಃ ಪರ್ಜನ್ಯಃ ಸ್ಯಾದಿತಿ । ಮೂಲತಃ ಸಂಮೃಜ್ಯಾತ್ । ವೃಷ್ಟಿಮೇವೋದ್ಯಚ್ಛತಿ । ತದುವಾ ಆಹುಃ ಅಗ್ರತ ಏವೋಪರಿಷ್ಟಾತ್ ಸಂಮೃಜ್ಯಾತ್ । ಮೂಲತೋಽಧಸ್ತಾತ್ ।

ದಿವಶ್ಶಿಲ್ಪಮವತತಂ ಪೃಥಿವ್ಯಾಃ ಕಕುಭಿಃ ಶ್ರಿತಮ್ । ತೇನ ವಯಂ ಸಹಸ್ರವಲ್ಶೇನ । ಸಪತ್ನಂ ನಾಶಯಾಮಸಿ ಸ್ವಾಹಾ ॥ ಸ್ವಾಹೇತಿ ಸ್ರುಕ್ ಸಮ್ಮಾರ್ಜನಾನ್ಯಗ್ನೌ ಪ್ರಹರತಿ । ತಾನ್ಯೇಕೇ ವೃಥೈವಾಪಾಸ್ಯನ್ತಿ ತತ್ತಥಾ ನ ಕಾರ್ಯಮ್ ॥

## ಪರಿಧಿಸ್ಥಾಪನೇ

ಗಂಧರ್ವೋಽಸಿ ವಿಶ್ವಾವಸುರ್ವಿಶ್ವಸ್ಮಾದೀಶತೋ ಯಜಮಾನಸ್ಯ ಪರಿಧಿರೀಡಿತಃ । ವಿಶ್ವಮೇವಾಯುರ್ಯಜಮಾನೇ ದಧಾತಿ । ಇಂದ್ರಿಯಮೇವ ಯಜಮಾನೇ ದಧಾತಿ । ಪ್ರಾಣಾಪಾನೌ ಮಿತ್ರಾವರುಣೌ । ಪ್ರಾಣಾಪಾನಾವೇವಾತ್ಮನ್ ದಧಾತಿ । ಸೂರ್ಯಸ್ತ್ವಾ ಪುರಸ್ತಾತ್ ಪಾತ್ವಿತ್ಯಾಹ ರಕ್ಷಸಾಮಪಹತ್ಯೈ । ವಸೂನಾಂ ರುದ್ರಾಣಾಮಾದಿತ್ಯಾನಾಂ ಸದನೇ ಸೀದೇತ್ಯಾಹ । ದೇವತಾನಾಮೇವ ಸದನೇ ಪ್ರಸ್ತರಂ ಸಾದಯತಿ । ಪರಿಧೀನ್ ಪರಿದಧಾತಿ ರಕ್ಷಸಾಮಪಹತ್ಯೈ । ಸಂಸ್ಪರ್ಶಯತಿ ರಕ್ಷಸಾಮನನ್ವವಚಾರಾಯ । ನ ಪುರಸ್ತಾತ್ ಪರಿದಧಾತಿ ಆದಿತ್ಯೋ ಹ್ಯೇವೋದ್ಯನ್ ಪುರಸ್ತಾದ್ರಕ್ಷಾಂಸ್ಯಪಹನ್ತಿ । ಊರ್ಧ್ವೇ ಸಮಿಧಾ ವಾ ದಧಾತ್ಯುಪರಿಷ್ಟಾದೇವ ರಕ್ಷಾಂಸ್ಯಪಹನ್ತಿ । ಸಮಧ್ಯಮಮೇವಾಗ್ರೇ ಪರಿಧಿಂ ಪರಿದಧಾತಿ ॥

## ಅಗ್ನಿಃ

ಯದಾ ಲೇಲಾಯತೇ ಹ್ಯರ್ಚಿಃ ಸಮಿದ್ಧೇ ಹವ್ಯವಾಹನೇ । ತದಾಽಽಜ್ಯಭಾಗಾವಂತರೇಣಾಹುತೀಃ ಪ್ರತಿಪಾದಯೇತ್ ॥

ಕಾಲೀ ಕರಾಲೀ ಚ ಮನೋಜವಾ ಚ
ಸುಲೋಹಿತಾ ಯಾ ಚ ಸುಧೂಮ್ರವರ್ಣಾ ।
ಸ್ಫುಲಿಂಗಿನೀ ವಿಶ್ವರುಚೀ ಚ ದೇವೀ
ಲೇಲಾಯಮಾನಾ ಇತಿ ಸಪ್ತಜಿಹ್ವಾಃ ॥

## ಇಧ್ಮಾಧಾನ

ಅಗ್ನಿರಬಿಭೇತ್ । ಆಹುತಯೋ ಮಾತ್ಯೋಪ್ಯಂತಿಕೇ । ಸ ಏತಾ೯ ಸಮಿಧಮ ಪಶ್ಯತ್। ತಾಮಾಧತ್ತ । ತತೋ ಅಗ್ನಾವಾಹುತಯೋ ಧ್ರಿಯನ್ತ । ಯದೇನ೯ ಸಮಯಚ್ಛತ್ । ತತ್ ಸಮಿಧಃ ಸಮಿತ್ತ್ವಮ್ । ಆದೀಪ್ತಾಯಾಂ ಜುಹೋತಿ । ಸಮಿದ್ಧಮಿವ ಹಿ ಬ್ರಹ್ಮವರ್ಚಸಮ್ ।

## ಆಘಾರ

ದೇವಾಃ ಸಾಮಿಧೇನೀರನೂಚ್ಯ ಯಜ್ಞಂ ನಾನ್ವಪಶ್ಯನ್ ತಾನ್ ಪ್ರಜಾಪತಿಸ್ತೂಷ್ಣೀ ಮಾಘಾರಮಾಘಾರಯತ್ತತೋ ವೈ ದೇವಾ ಯಜ್ಞಮನ್ವಪಶ್ಯನ್ ಯತ್ತೂಷ್ಣೀಮ್ ಆಘಾರಮಾಘಾರಯತಿ ।

ಋಜುಮಾಘಾರಯತಿ । ಋಜುರಿವ ಹಿ ಪ್ರಾಣಃ । ಸಂತತಮಾಘಾರಯತಿ । ಪ್ರಾಣಾನಾಮನ್ನಾದ್ಯಸ್ಯ ಸಂತತ್ಯೈ । ಅಥೋ ರಕ್ಷ ಸಾಮಪಹತ್ಯೈ ॥

## ಆಜ್ಯಭಾಗ

ಚಕ್ಷುಷೀ ವಾ ಏತೇ ಯಜ್ಞಸ್ಯ ಯದಾಜ್ಯಭಾಗೌ ಯದಾಜ್ಯಭಾಗೌ ಯಜತಿ ಚಕ್ಷುಷೀ ಏವ ತದ್ಯಜ್ಞಸ್ಯ ಪ್ರತಿದಧಾತಿ ಪೂರ್ವಾರ್ಧೇ ಜುಹೋತಿ ತಸ್ಮಾತ್ ಪೂರ್ವಾರ್ಧೇ ಚಕ್ಷುಷೀ ಪ್ರಬಾಹುಕ್ ಜುಹೋತಿ ತಸ್ಮಾತ್ ಪ್ರಬಾಹುಕ್ ಚಕ್ಷುಷೀ ದೇವಲೋಕಂ ವಾ ಅಗ್ನಿನಾ ಯಜಮಾನೋಽನುಪಶ್ಯತಿ ಪಿತೃಲೋಕ೯ ಸೋಮಾಯ್ಯೈವಮಿವ ಹೀಮೌ ಲೋಕಾವನಯೋರ್ಲೋಕಯೋರನುಖ್ಯಾತ್ಯೈ ॥

## ಆಹುತಿದ್ರವ್ಯ

ಘೃತೇ ಚರುಂ ನಿರ್ವಪೇತ ಯೋಽಪ್ರತಿಷ್ಠಿತೋ ಮನ್ಯೇತ ॥ ಮಹತ್ಯೈ ವಾ ಏತದ್ದೇವತಾಯೈ ರೂಪಮ್ । ಯನ್ಮಧು । ಯನ್ಮಧುನಾ ಜುಹೋತಿ । ಮಹತೀಮೇವ ತದ್ದೇವತಾ ಪ್ರೀಣಾತಿ । ಆಜ್ಯೇನ ವಾ ಸಮಿತ್ ಕ್ಷಿರಾನ್ನ ಆಜ್ಯ ದ್ರವ್ಯೈಃ ವಾ ಸಮಿತ್ ಆಜ್ಯ ಕ್ಷೀರಾನ್ನ ಆಜ್ಯ ಮಧು ದ್ರವ್ಯೈಃ ವಾ ॥

## ಸ್ವಿಷ್ಟಕೃತ್ ಹೋಮ

**ಬೃಹತ್ಯಾ ಶ್ರೀಕಾಮೋ ಯಶಸ್ಕಾಮಃ ಕುರ್ವೀತ ।**

ಎಂದು ಐತರೇಯ ಬ್ರಾಹ್ಮಣ ತಿಳಿಸುವಂತೆ ಬೃಹತೀಛಂದಸ್ಸಿನ ಸ್ವಿಷ್ಟಕೃನ್ಮಂತ್ರ ಏದು–

**ಏನಾ ವೋ ಅಗ್ನಿಂ ನಮಸೋರ್ಜೋ ನ ಪಾತಮಾ ಹುವೇ । ಪ್ರಿಯಂ ಚೇತಿಷ್ಠಮರತಿಂ ಸ್ವಧ್ವರಂ ವಿಶ್ವಸ್ಯ ದೂತಮಮೃತಂ (ತೋಂ) ಉದಸ್ಯ ರೋಚಿರಸ್ಥಾದಾಜುಹ್ವಾನಸ್ಯ ಮೀಳ್ಹುಷಃ । ಉದ್ಧೂಮಾಸೋ ಅರುಷಾಸೋ ದಿವಿಸ್ಪೃಶಃ ಸಮಗ್ನಿಮಿಂಧತೇ ನರಃ ॥**

ತುಪ್ಪ, ಪಲಾಶಸಮಿತ್, ಕ್ಷೀರಾನ್ನ, ಜೇನುತುಪ್ಪ ಮೊದಲಾದವು ಬೃಹತೀ ಸಹಸ್ರಹೋಮಕ್ಕೆ ಪ್ರಮುಖ ದ್ರವ್ಯಗಳು.

ಸುವರ್ಣ ವಿಷ್ಣುಪ್ರತಿಮಾಸಹಿತವಾಗಿ ಸಹಸ್ರಕಲಶಗಳನ್ನಿಟ್ಟು ಪ್ರತಿಮಂತ್ರವನ್ನು ಒಂದೊಂದು ಕಲಶಕ್ಕೆ ಜಪಿಸಲು ಋತ್ವಿಜರನ್ನಿಟ್ಟು ಆರಾಧಿಸುವುದು ಉತ್ತಮೋತ್ತಮ ಪಕ್ಷ. ಪ್ರತಿ ಋಕ್ಕನ್ನು ೧೦ ಸಲ ಜಪಿಸುವುದು ಉತ್ತಮ ಪಕ್ಷ. ಸ್ತೋತ್ರ ನಮಸ್ಕಾರ, ತರ್ಪಣ, ಅನುಕ್ರಮಣಿಕೆ, ಚಕ್ರಾಬ್ಜಮಂಡಲ ಆರಾಧನೆ, ಸರ್ವತೋಭದ್ರಮಂಡಲ ಆರಾಧನೆಗಳನ್ನು ಹೋಮಾಂಗವಾಗಿ ನಡೆಸುವುದು.

ಸುವರ್ಣನಾಣ್ಯಗಳಿಂದ ಕೃಚ್ಛ್ರಾಚರಣೆ, ಸುವರ್ಣದಾನ, ತಿಲರಾಶಿದಾನ, ಗೋದಾನ, ಭೂದಾನಸಹಿತ ದಶದಾನಾದಿಗಳೊಂದಿಗೆ ಹೋಮ ಸಾಂಗವಾಗುತ್ತದೆ.

-- ಶುಭಮಸ್ತು --

*   *   *

# ಈ ಗ್ರಂಥ ಓದುವವರಿಗೆ ಕೆಲವು ಅವಶ್ಯ ಮಾಹಿತಿಗಳು

೧. ಇಲ್ಲಿ ಹಾಕಿರುವ ಸಂಖ್ಯೆ ಋಗ್ವೇದ ಶಾಕಲಸಂಹಿತೆಯ ಮಂಡಲ ಸೂಕ್ತ ಹಾಗೂ ಮಂತ್ರಕ್ಕೆ ಸಂಬಂಧಿಸಿದೆ. ಉದಾಹರಣೆಗೆ ಆರಂಭದ ಪುಟದಲ್ಲಿ ಕೆಳಗೆ ನೀಡಿರುವ ಸಂಖ್ಯೆ ಹೀಗಿದೆ–

"೧೦/೧೨೦" ಅಂದರೆ ಹತ್ತನೆಯ ಮಂಡಲದ ನೂರಇಪ್ಪತ್ತನೆಯ ಸೂಕ್ತವೆಂದು ತಿಳಿಯಬೇಕು. ಹೀಗೆಯೇ ಇತರ ಕಡೆಗಳಲ್ಲಿಯೂ ತಿಳಿಯಬೇಕು.

೨. ಈ ಪುಸ್ತಕದಲ್ಲಿ ಮಂತ್ರಾಂತ್ಯದಲ್ಲಿ ಸ್ವಾಹಾಪೂರ್ವದಲ್ಲಿ ಟಿ ಸ್ಥಾನದಲ್ಲಿ ಓಂಕಾರವನ್ನು ಹಾಕಿಹೇಳಿಲ್ಲ. ಏಕೆಂದರೆ ಮಂತ್ರಾಂತ್ಯದಲ್ಲಿ ನನ್ನ ಅಭಿಪ್ರಾಯ ಪ್ರಕಾರ ಓಂಕಾರ ಹಾಕಿ ಸ್ವಾಹಾ ಎಂದು ಹೇಳದೆ ಎಲ್ಲೆಡೆಗಳಲ್ಲಿ ಯಾಗ ಮಾಡುವಾಗ ಹೇಳುವಂತೆ ಸ್ವಾಹಾಪೂರ್ವದಲ್ಲಿರುವ ಉದಾತ್ತವನ್ನು ವ್ಯತ್ಯಾಸ ಮಾಡದೆ, ಪ್ರಾತಿಹತಸ್ವರಿತವನ್ನು ಹಾಗೂ ಪ್ರಚಯವನ್ನು ಅನುದಾತ್ತವಾಗಿಸಿ ಸ್ವಾ॒ಹಾ ಎಂದುಚ್ಚರಿಸುವುದು ಉತ್ತಮವೆಂದು ನನ್ನ ಸ್ವಂತ ಅಭಿಪ್ರಾಯ.

ಅಥವಾ– ಓಂಕಾರವನ್ನು ಮಂತ್ರಾಂತ್ಯದಲ್ಲಿ ಹೇಳಬಯಸುವವರು **ಸ್ವಾಹಾ** ಎಂದ ಬಳಿಕ ಉಚ್ಚರಿಸಬಹುದೆಂದು ಮೈಸೂರಿನ ಮೀಮಾಂಸಾಧ್ಯಾಪಕರೊಬ್ಬರು ನನ್ನಲ್ಲಿ ಹೇಳಿದ ಕ್ರಮವನ್ನು ಅನುಸರಿಸಿದರೆ ಉತ್ತಮವೆಂದು ನನ್ನ ಅಭಿಪ್ರಾಯ.

ಇನ್ನು ಟಿ ಸ್ಥಾನದಲ್ಲಿ ಓಂಕಾರ ಹಾಕಿ ಹೇಳಬೇಕೆಂದರೆ ಸ್ವರನಿಯಮ ತಿಳಿದು ಹೇಳುವುದು ಒಳ್ಳೆಯದು. ಟಿ ಎಂದರೆ ಕೊನೆಯ ಸ್ವರವನ್ನು ಆರಂಭಿಸಿರುವ ಶಬ್ದಸ್ವರೂಪ. ಓಂಕಾರವಾದರೂ ನಿತ್ಯೋದಾತ್ತವಾಗಿರುವುದರಿಂದ ಟಿ ಸ್ಥಾನದಲ್ಲಿ ಉದಾತ್ತ ಓಂಕಾರವನ್ನು ಹಾಕುವಾಗ ಹಿಂದೆ ಪ್ರಚಯವನ್ನುಅನುದಾತ್ತವಾಗಿಸಬೇಕು. ಉದಾಹರಣೆಗೆ ಮೊದಲಮಂತ್ರದಲ್ಲಿ ಕೊನೆಯಲ್ಲಿ–

**"ಯೋ॑ಯುವತೀನಾಮ್"** ಎಂದಿದೆ. ಇಲ್ಲಿ ಅಂತ್ಯಸ್ವರ ನಕಾರೋತ್ತರ ಆಕಾರ ದಿಂದಾರಂಭಿಸಿರುವ ಶಬ್ದರೂಪವೆಂದರೆ "ಆಮ್". ಇದು ಪ್ರಚಯವಾಗಿದ್ದು ಇದರ ಸ್ಥಾನದಲ್ಲಿ ಓಂಕಾರವನ್ನು ಹಾಕುವಾಗ ಹಿಂದಿರುವ ಪ್ರಚಯಸ್ವರವಾದ "ತೀ"ಯನ್ನು ಅನುದಾತ್ತವಾಗಿಸಬೇಕು ಅಂದರೆ–

**"ಯೋ॑ಯುವತೀ॒ನೋಂ ಸ್ವಾಹಾ"** ಎಂದುಚ್ಚರಿಸಿ ಆಹುತಿ ನೀಡಬೇಕೆಂದು ಕೆಲವರ ಅಭಿಪ್ರಾಯ. ಪ್ರಾತಿಹತ ಸ್ವರಿತಸ್ಥಾನದಲ್ಲಿ ಓಂಕಾರವನ್ನು ಹಾಕಿದರೆ ಹಿಂದಿನ ಉದಾತ್ತವನ್ನು ವ್ಯತ್ಯಾಸ ಮಾಡುವ ಆವಶ್ಯಕತೆಯಿಲ್ಲ. ಉದಾಹರಣೆಗೆ–

**"ವಧಾನಾಮ್" = "ವಧಾನೋಂ ಸ್ವಾಹಾ"** ಎಂದಾಗುತ್ತದೆ. ಇನ್ನು ಉದಾತ್ತ ಸ್ಥಾನದಲ್ಲಿ ಓಂಕಾರ ಹಾಕಿದರೆ ಹಿಂದೆ ಅನುದಾತ್ತವಿದ್ದರೆ ಅದನ್ನು ವ್ಯತ್ಯಾಸ ಮಾಡುವ ಸಂದರ್ಭವಿಲ್ಲ. ಉದಾಹರಣೆಗೆ–

**"ಧಿಯಾ" = "ಧಿಯೋಂ ಸ್ವಾಹಾ"** ಎಂದಾಗುತ್ತದೆ. ಹಿಂದೆ ಉದಾತ್ತವಿದ್ದರೆ ವ್ಯತ್ಯಾಸ ಮಾಡುವಅವಶ್ಯಕತೆಯೇ ಬರುವುದಿಲ್ಲ. ಉದಾ–

**"ಯುಕ್ಷ್ವಾಹಿ"** ಇಲ್ಲಿ **"ಯುಕ್ಷ್ವಾ ಹೋಂ ಸ್ವಾಹಾ"** ಎಂದುಚ್ಚರಿಸಬೇಕು. ಹೀಗೆಯೇ **"ಇಮೇ ಹಿ ತೇ"** ಎಂಬಲ್ಲೂ ತಿಳಿಯಬೇಕು.

ಸಸ್ವರವಾಗಿ ಉಚ್ಚರಿಸುವವರು ಟಿಸ್ಥಾನದಲ್ಲಿ ಓಂಕಾರವನ್ನು ಹಾಕಿ ಸ್ವಾಹಾ ಎಂದುಚ್ಚರಿಸಿ ಆಹುತಿಕೊಡುವಾಗ ಇಷ್ಟು ವಿಚಾರವನ್ನು ತಿಳಿದಿರುವುದು ಅನಿವಾರ್ಯ. ಇನ್ನು ಸಸ್ವರವಾಗಿ ಉಚ್ಚರಿಸಿ ಮಂತ್ರಾಂತ್ಯದಲ್ಲಿ ಸ್ವಾಹಾಹುತಿಯನ್ನು ಕೊಡುವವರು ಮಂತ್ರಾಂತ್ಯದ ನಿತ್ಯಸ್ವರಿತವನ್ನು ಕಂಪವಾಗಿಸಬೇಕು. ಉದಾತ್ತ ಬಂದರೆ ವ್ಯತ್ಯಾಸ ಮಾಡದೇ ಸ್ವಾಹಾಹುತಿ ನೀಡುವುದು. ಉದಾತ್ತಪೂರ್ವದಲ್ಲಿರುವ ಪ್ರಾತಿಹತಸ್ವರಿತವನ್ನು ಹಾಗೂ ಸ್ವರಿತಪೂರ್ವದಲ್ಲಿನ ಪ್ರಚಯವನ್ನು ಅನುದಾತ್ತವಾಗಿಸಿ ಸ್ವಾಹಾ ಎಂದುಚ್ಚರಿಸಿ ಆಹುತಿ ನೀಡಬೇಕು. ಮಂತ್ರಾಂತ್ಯದಲ್ಲಿ ಅನುದಾತ್ತ ಬರುವುದೇ ಇಲ್ಲವಾದುದರಿಂದ ಅದರ ಪ್ರಶ್ನೆಯೇ ಬರುವುದಿಲ್ಲ.

ಮಂತ್ರಾಂತ್ಯದಲ್ಲಿ '*' ಎಂದಿರುವ ಚಿಹ್ನೆಯು ಜಾತ್ಯಸ್ವರಿತವನ್ನು ಸೂಚಿಸುತ್ತದೆ.

೩ ಐತರೇಯಬ್ರಾಹ್ಮಣದಲ್ಲಿ ಶ್ರೌತಯಜ್ಞದ ಸವನಗಳಲ್ಲಿ ಶಸ್ತ್ರಮಂತ್ರಗಳ ವಿಹರಣ ಕ್ರಮವನ್ನು ವಿಧಿಸಿರುವುದನ್ನು ಕಾಣಬಹುದು. ಇಲ್ಲಿ ವಾಲಖಿಲ್ಯಮಂತ್ರಗಳಿಗೆ ಸಂಬಂಧಿಸಿದ ವಿಹರಣಕ್ರಮವನ್ನು ಸೂಚಿಸಿರುವುದನ್ನು ಕಾಣಬಹುದು– "ಪಚ್ಛಃ ಪ್ರಥಮಂ ಷಡ್ವಾಲಖಿಲ್ಯಾನಾಂ ಸೂಕ್ತಾನಿ ವಿಹರತಿ, ಅರ್ಧರ್ಚಶೋ ದ್ವಿತೀಯಮ್, ಋಕ್ಶಃ ತೃತೀಯಂ. ಸ ಪಚ್ಛೋ ವಿಹರನ್ ಪ್ರಗಾಥೇ ಪ್ರಗಾಥ ಏವ ಏಕಪದಾಂ ದಧ್ಯಾತ್, ಸ ವಾಚಃ ಕೂಟಃ" ॥ ಇತಿ ॥ ಇದರ ವಿವರಣೆಯನ್ನು ಹೀಗೆ ಕಾಣಬಹುದು. "ವಾಲಖಿಲ್ಯನಾಮಕಾಃ ಕೇಚನ ಮಹರ್ಷಯಃ ತೇಷಾಂ ಸಂಬಂಧೀನಿ ಅಷ್ಟಸೂಕ್ತಾನಿ ವಿದ್ಯಂತೇ; ತಾನಿ ವಾಲಖಿಲ್ಯನಾಮಕೇ ಗ್ರಂಥೇ ಸಮಾಮ್ನಾಯಂತೇ । ತೇಷು ಆದೌ ಯಾನಿ ಷಟ್‌ಸೂಕ್ತಾನಿ, ತಾನಿ ಪ್ರಥಮಂ "ಪಚ್ಛಃ" ಪಾದಶೋ ವಿಹರೇತ್ । ತತೋ ದ್ವಿತೀಯಸ್ಯಾಮ್ ಆವೃತ್ತೌ ಅರ್ಧರ್ಚಶೋ ವಿಹರೇತ್ । ತೃತೀಯಸ್ಯಾಮ್ ಆವೃತ್ತೌ ಋಕ್ಶೋ ವಿಹರೇತ್ । ಯದಾ ಪಚ್ಛೋ ವಿಹರತಿ ತದಾನೀಮ್ ಏಕೈಕಸ್ಮಿನ್ ಪ್ರಗಾಥ ಏಕೈಕಾಮ್ ಏಕಪದಾಂ ದಧ್ಯಾತ್" ॥ ಇತ್ಯಾದಿ ॥ (ಐ. ಬ್ರಾ. ಅ. ೪. ಖಂ.೮)

ಇಲ್ಲಿ ತೃತೀಯಸವನದಲ್ಲಿ ಶಂಸನೆಗೈಯುವ ವಾಲಖಿಲ್ಯಸೂಕ್ತಮಂತ್ರಗಳನ್ನು ಯಾವ ಪ್ರಕಾರ ವಿಹರಣ ಮಾಡಬೇಕೆಂದು ಹೇಳಿದ್ದಾರೆ. ಮೊದಲು ಪಾದಶಃ, ಬಳಿಕ ಅರ್ಧರ್ಚಶಃ ಬಳಿಕ ಋಕ್ಶಃ ವಿಹರಣ ಮಾಡಬೇಕೆನ್ನುತ್ತದೆ. ಇದರ ವಿವರಣೆಯನ್ನು ಮೂಲ ಹಾಗೂ ಭಾಷ್ಯ ಹಾಗೂ ವ್ಯಾಖ್ಯಾನಗ್ರಂಥಗಳಿಂದ ತಿಳಿಯಬೇಕು. ವಾಲಖಿಲ್ಯಶಂಸನಮಂತ್ರಗಳ ಪಾದಶಃ ವಿಹರಣಕ್ಕೊಂದು ಉದಾಹರಣೆಯನ್ನು ಇಲ್ಲಿ ನೀಡಿದ್ದೇನೆ–

ವಿಹರಣ ಮಾಡುವ ಮೊದಲು ವಾಲಖಿಲ್ಯಸೂಕ್ತದ ಮಂತ್ರಗಳು –

ಅಭಿ ಪ್ರ ವಃ ಸುರಾಧಸಮಿಂದ್ರಮರ್ಚ ಯಥಾ ವಿದೇ । ಯೋ
ಜರಿತೃಭ್ಯೋ ಮಘವಾ ಪುರೂವಸುಃ ಸಹಸ್ರೇಣೇವ ಶಿಕ್ಷತಿ ॥ ೮.೪೯.೧ ॥

ಶತಾನೀಕೇವ ಪ್ರ ಜಿಗಾತಿ ಧೃಷ್ಣುಯಾ ಹಂತಿ ವೃತ್ರಾಣಿ ದಾಶುಷೇ ।
ಗಿರೇರಿವ ಪ್ರ ರಸಾ ಅಸ್ಯ ಪಿನ್ವಿರೇ ದತ್ರಾಣಿ ಪುರುಭೋಜಸಃ ॥ ೮.೪೯.೨ ॥

ಪ್ರ ಸು ಶ್ರುತಂ ಸುರಾಧಸಮರ್ಚಾ ಶಕ್ರಮಭಿಷ್ಟಯೇ । ಯಃ ಸುನ್ವತೇ
ಸ್ತುವತೇ ಕಾಮ್ಯಂ ವಸು ಸಹಸ್ರೇಣೇವ ಮಂಹತೇ ॥ ೮.೫೦.೧ ॥

ಶತಾನೀಕಾ ಹೇತಯೋ ಅಸ್ಯ ದುಷ್ಟರಾ ಇಂದ್ರಸ್ಯ ಸಮಿಷೋ ಮಹೀಃ ।
ಗಿರಿರ್ನ ಭುಜ್ಮಾ ಮಘವತ್ಸು ಪಿನ್ವತೇ ಯದೀಂ ಸುತಾ ಅಮಂದಿಷುಃ ॥
೮.೫೦.೨ ॥

ಶಾಖಾಂತರೀಯಮಂತ್ರಾಃ

ಇಂದ್ರೋ ವಿಶ್ವಸ್ಯ ಗೋಪತಿಃ ॥ ಇಂದ್ರೋ ವಿಶ್ವಸ್ಯ ಭೂಪತಿಃ ॥

ವಿಹರಣಾನಂತರದ ಮಂತ್ರಗಳು

"ಅಭಿ ಪ್ರ ವಃ ಸುರಾಧಸಮಿಂದ್ರಸ್ಯ ಸಮಿಷೋ ಮಹೀಃ । ಶತಾನೀಕಾ
ಹೇತಯೋ ಅಸ್ಯ ದುಷ್ಟರಾ ಇಂದ್ರಮರ್ಚ ಯಥಾ ವಿದೋಽಶಿಮ್ ॥ ಯೋ
ಜರಿತೃಭ್ಯೋ ಮಘವಾ ಪುರೂವಸುರ್ಯದೀಂ ಸುತಾ ಅಮಂದಿಷುಃ ।
ಗಿರಿರ್ನ ಭುಜ್ಮಾ ಮಘವತ್ಸು ಪಿನ್ವತೇ ಸಹಸ್ರೇಣೇವ ಶಿಕ್ಷತೋಽಶಿಮ್ ॥

ಇಂದ್ರೋ ವಿಶ್ವಸ್ಯ ಗೋಪತೋಳಿಮ್ ॥

(ಪ್ರಗಾಥಾಂತೇ ಚತುರ್ಮಾತ್ರಮ್.ಆ.ಶ್ರೌ.ಸೂ)

ಪ್ರ ಸು ಶ್ರುತಂ ಸುರಾಧಸಂ ಹಂತಿ ವೃತ್ರಾಣಿ ದಾಶುಷೇ । ಶತಾನೀಕೇವ ಪ್ರ ಜಿಗಾತಿ ಧೃಷ್ಣುಯಾರ್ಚಾ ಶಕ್ರಮಭಿಷ್ಟಯೋಳಿಮ್ ॥

ಯಃ ಸುನ್ವತೇ ಸ್ತುವತೇ ಕಾಮ್ಯಂ ವಸು ದತ್ರಾಣಿ ಪುರುಭೋಜಸಃ । ಗಿರೇರಿವ ಪ್ರ ರಸಾ ಅಸ್ಯ ಪಿನ್ವಿರೇ ಸಹಸ್ರೇಣೇವ ಮಂಹತೋಳಿಮ್ ॥

ಇಂದ್ರೋ ವಿಶ್ವಸ್ಯ ಭೂಪತೋಳಿಮ್ ॥

೪. ನಾನು ಈ ಮೇಲೆ ಹೇಳಿದ ಸ್ವರನಿಯಮವು ಓಂಕಾರದ ಉದಾತ್ತಸ್ವರ ನಿಮಿತ್ತವಾಗಿ ಮಾಡಿದುದಾಗಿದೆ. ಹಿಂದಿರುವ ಸ್ವರಿತಾದಿಸ್ವರಗಳನ್ನು ವ್ಯತ್ಯಾಸ ಮಾಡದೇ ಟಸ್ಥಾನದಲ್ಲಿ ಓಂಕಾರವನ್ನು ಸೇರಿಸಿರುವುದನ್ನೂ ಮೂಲ ಗ್ರಂಥಗಳಲ್ಲಿ ಕಾಣಬಹುದಾಗಿದೆ.

ಈ ಮೇಲೆ ಹೇಳಿದಂತೆಯೇ ಬೃಹತೀಸಹಸ್ರಗ್ರಂಥವೂ ಕೂಡ ಶಿಷ್ಯಪರಂಪರೆ ಯಿಂದಲೇ ಬಂದಿದೆ. ವಿಶ್ವಾಮಿತ್ರರೇ ಇದರ ಋಷಿಗಳು. ಬೃಹತೀಛಂದಸ್ಸು. ಪ್ರಾಣೇಶಗರುಡಗಮನನಾದ ಶ್ರೀಮನ್ನಾರಾಯಣನೇ ದೇವತೆ. ಸ್ತುತಿ–ನುತ್ಯಾದಿಗಳಲ್ಲಿ ವಿನಿಯೋಗ. ನನ್ನಲ್ಲಿ ಉಪಲಬ್ಧವಿರುವ ಗ್ರಂಥಗಳಿಂದ ಇಲ್ಲಿ ನೀಡಿರುವ ಮಾಹಿತಿ ಗಳನ್ನು ಸಂಗ್ರಹಿಸಿದ್ದೇನೆ. ನಾನು ಸಂಗ್ರಹಿಸಿ ಅಧ್ಯಯನ ಮಾಡಿ ನೀಡಿದ ಈ ವಿಚಾರಗಳಿಂದ ಜಿಜ್ಞಾಸುಗಳಿಗೂ ಪುರೋಹಿತಬಂಧುಗಳಿಗೂ ಅನುಕೂಲವಾದರೆ ನನ್ನ ಪ್ರಯತ್ನ ಯಜ್ಞನಾರಾಯಣನಿಗೆ ಮುಟ್ಟಿತೆಂದು ಭಾವಿಸುತ್ತೇನೆ.

–ವಿದ್ವಾನ್ ವೇದಮೂರ್ತಿ ಡಾ॥ ಕದ್ರಿ ಪ್ರಭಾಕರ ಅಡಿಗ

# ವಿಷಯಾನುಕ್ರಮಣಿಕಾ



* * *

॥ ಶ್ರೀಹರಯೇ ಗುರವೇ ನಮಃ ಓಮ್ ॥

॥ ಓಂ ನಮೋ ಭಗವತೇ ವಾಸುದೇವಾಯ ಓಮ್ ॥

॥ ಓಂ ನಮೋ ಭಗವತೇ ವೇದವ್ಯಾಸಾಯ ಓಮ್ ॥

॥ ಓಂ ಶ್ರೀಗುರುಭ್ಯೋ ನಮಃ ॥ ಹರಿಃ ಓಮ್ ॥

# ಅಥ ಬೃಹತೀಸಹಸ್ರಮ್

## ಅಥ ಪ್ರಾಗ್ಭಾಗಃ

### ಅಥ ಪ್ರಥಮಖಂಡಃ

ಶ್ರೀಗುರುಭ್ಯೋ ನಮಃ ಹರಿಃ ಓಮ್ ॥

ಓಂ ವಿಶ್ವಾಯ ನಮಃ ಓಮ್ । ಓಂ ವಷಟ್ಕಾರಾಯ ನಮಃ ಓಮ್ । ಓಂ ಭೂತಕೃತೇ ನಮಃ ಓಮ್ ॥

ಓಂ [1]ತದಿದಾಸ ಭುವನೇಷು ಜ್ಯೇಷ್ಠಂ, ಪು ನದಂ ವ ಓದತೀನಾಮ್ ।

ಯತೋ ಜಜ್ಞ ಉಗ್ರಸ್ತ್ವೇಷನೃಮ್ಣೋ ರು ನದಂ ಯೋಯುವತೀನಾಮ್ ॥ ೧ ॥

॥ ೩ ॥ ೫ ॥

ಓಂ ವಿಷ್ಣವೇ ನಮಃ ಓಮ್ । ಓಂ ಭೂತಭವ್ಯಭವತ್ಪ್ರಭವೇ ನಮಃ ಓಮ್ । ಓಂ ಭೂತಭೃತೇ ನಮಃ ಓಮ್ ॥

ಸದ್ಯೋ ಜಜ್ಞಾನೋ ನಿ ರಿಣಾತಿ ಶತ್ರೂನ್, ಪತಿಂ ವ್ರೋ ಅಘ್ನ್ಯಾನಾಮ್ ।

ಅನು ಯಂ ವಿಶ್ವೇ ಮದಂತ್ಯೂಮಾಃ ಷೋ ಧೇನೂನಾಮಿಷುಧ್ಯಸಿ ॥ ೨ ॥ ೪ ॥

॥ ೬ ॥

ಓಂ ಭಾವಾಯ ನಮಃ ಓಮ್ ॥

ವಾವೃಧಾನಃ ಶವಸಾ ಭೂರ್ಯೋಜಾ, ನದಂ ವ ಓದತೀನಾಮ್ ।

---

1. ೧೦/೧೨೦॥ + ೯/೮೮/೨.

ಶತ್ರುರ್ದಾಸಾಯ ಭಿಯಸಂ ದಧಾತಿ, ನದಂ ಯೋಯುವತೀನಾಮ್ ॥ ೭ ॥

ಓಂ ಭೂತಾತ್ಮನೇ ನಮಃ ಓಮ್ ॥

ಅವ್ಯನಚ್ಚ ವ್ಯನಚ್ಚ ಸಸ್ನಿ, ಪತಿಂ ವೋ ಅಘ್ನ್ಯಾನಾಮ್ । ಸಂ ತೇ ನವಂತ ಪ್ರಭೃತಾ, ಮದೇಷು ಧೇನೂನಾಮಿಷುಧ್ಯಸಿ ॥ ೮ ॥

ಓಂ ಭೂತಭಾವನಾಯ ನಮಃ ಓಮ್ ॥

ತ್ವೇ ಕ್ರತುಮಪಿ ವೃಂಜಂತಿ ವಿಶ್ವೇ, ನದಂ ವ ಓದತೀನಾಮ್ । ದ್ವಿರ್ಯದೇತೇ ತ್ರಿರ್ಭವಂತ್ಯೂಮಾ, ನದಂ ಯೋಯುವತೀನಾಮ್ ॥ ೯ ॥

ಓಂ ಪೂತಾತ್ಮನೇ ನಮಃ ಓಮ್ ॥

ಸ್ವಾದೋಃ ಸ್ವಾದೀಯಃ ಸ್ವಾದುನಾ ಸೃಜಾ ಸಂ, ಪತಿಂ ವೋ ಅಘ್ನ್ಯಾನಾಮ್ । ಅದಃ ಸು ಮಧು ಮಧುನಾಭಿ ಯೋಧೀರ್ಧೇನೂನಾಮಿಷುಧ್ಯಸಿ ॥ ೧೦ ॥

ಓಂ ಪರಮಾತ್ಮನೇ ನಮಃ ಓಮ್ ॥

ಇತಿ ಚಿದ್ಧಿ ತ್ವಾ ಧನಾ ಜಯಂತಂ, ನದಂ ವ ಓದತೀನಾಮ್ । ಮದೇಽಮದೇ ಅನುಮದಂತಿ ವಿಪ್ರಾ, ನದಂ ಯೋಯುವತೀನಾಮ್ ॥ ೧೧ ॥

ಓಂ ಮುಕ್ತಾನಾಂ ಪರಮಾಗತಯೇ ನಮಃ ಓಮ್ ॥

ಓಜೀಯೋ ಧೃಷ್ಣೋ ಸ್ಥಿರಮಾತನುಷ್ವ, ಪತಿಂ ವೋ ಅಘ್ನ್ಯಾನಾಮ್ । ಮಾ ತ್ವಾ ದಭನ್ ಯಾತುಧಾನಾ ದುರೇವಾ, ಧೇನೂನಾಮಿಷುಧ್ಯಸಿ ॥ ೧೨ ॥

ಓಂ ಅವ್ಯಯಾಯ ನಮಃ ಓಮ್ ॥

ತ್ವಯಾ ವಯಂ ಶಾಶದ್ಮಹೇ ರಣೇಷು, ನದಂ ವ ಓದತೀನಾಮ್ । ಪ್ರಪಶ್ಯಂತೋ ಯುಧೇನ್ಯಾನಿ ಭೂರಿ, ನದಂ ಯೋಯುವತೀನಾಮ್ ॥ ೧೩ ॥

ಓಂ ಪುರುಷಾಯ ನಮಃ ಓಮ್ ॥

ಚೋದಯಾಮಿ ತ ಆಯುಧಾ ವಚೋಭಿಃ, ಪತಿಂ ವೋ ಅಘ್ನ್ಯಾನಾಮ್ ।
ಸಂ ತೇ ಶಿಶಾಮಿ ಬ್ರಹ್ಮಣಾ ವಯಾಂಸಿ, ಧೇನೂನಾಮಿಷುಧ್ಯಸಿ ॥ ೧೪ ॥

ಓಂ ಸಾಕ್ಷಿಣೇ ನಮಃ ಓಮ್ ॥

ಸ್ತುಷೇಯ್ಯಂ ಪುರುವರ್ಪಸಮೃಭ್ವಂ, ನದಂ ವ ಓದತೀನಾಮ್ ।
ಇನತಮಮಾಪ್ತ್ಯಮಾಪ್ತ್ಯಾನಾಂ, ನದಂ ಯೋಯುವತೀನಾಮ್ ॥ ೧೫ ॥

ಓಂ ಕ್ಷೇತ್ರಜ್ಞಾಯ ನಮಃ ಓಮ್ ॥

ಆ ದರ್ಷತೇ ಶವಸಾ ಸಪ್ತ ದಾನೂನ್, ಪತಿಂ ವೋ ಅಘ್ನ್ಯಾನಾಮ್ ।
ಪ್ರ ಸಾಕ್ಷತೇ ಪ್ರತಿಮಾನಾನಿ ಭೂರಿ, ಧೇನೂನಾಮಿಷುಧ್ಯಸಿ ॥ ೧೬ ॥

ಓಂ ಅಕ್ಷರಾಯ ನಮಃ ಓಮ್ ॥

ನಿ ತದ್ದಧಿಷೇಽವರಂ ಪರಂ ಚ, ನದಂ ವ ಓದತೀನಾಮ್ । ಯಸ್ಮಿನ್ನಾವಿಥಾ
ವಸಾ ದುರೋಣೇ, ನದಂ ಯೋಯುವತೀನಾಮ್ ॥ ೧೭ ॥

ಓಂ ಯೋಗಾಯ ನಮಃ ಓಮ್ ॥

ಆ ಮಾತರಾ ಸ್ಥಾಪಯಸೇ ಜಿಗತ್ನೂ, ಪತಿಂ ವೋ ಅಘ್ನ್ಯಾನಾಮ್ । ಅತ
ಇನೋಷಿ ಕರ್ವರಾ ಪುರೂಣಿ, ಧೇನೂನಾಮಿಷುಧ್ಯಸಿ ॥ ೧೮ ॥

ಓಂ ಯೋಗವಿದಾಂ ನೇತ್ರೇ ನಮಃ ಓಮ್ ॥

ಇಮಾ ಬ್ರಹ್ಮ ಬೃಹದ್ದಿವೋ ವಿವಕ್ತಿ, ನದಂ ವ ಓದತೀನಾಮ್ । ಇಂದ್ರಾಯ
ಶೂಷಮಗ್ರಿಯಃ ಸ್ವರ್ಷಾ, ನದಂ ಯೋಯುವತೀನಾಮ್ ॥ ೧೯ ॥

ಓಂ ಪ್ರಧಾನಪುರುಷೇಶ್ವರಾಯ ನಮಃ ಓಮ್ ॥

ಮಹೋ ಗೋತ್ರಸ್ಯ ಕ್ಷಯತಿ ಸ್ವರಾಜಃ, ಪತಿಂ ವೋ ಅಘ್ನ್ಯಾನಾಮ್ ।
ದುರಶ್ಚ ವಿಶ್ವಾ ಅವೃಣೋದಪ ಸ್ವಾ, ಧೇನೂನಾಮಿಷುಧ್ಯಸಿ ॥ ೨೦ ॥

ಓಂ ನಾರಸಿಂಹವಪುಷೇ ನಮಃ ಓಮ್ ॥

ಏವಾ ಮಹಾನ್ ಬೃಹದ್ದಿವೋ ಅಥರ್ವಾ, ನದಂ ವ ಓದತೀನಾಮ್ ।
ಅವೋಚತ್ ಸ್ವಾಂ ತನ್ವಗಿಮಿಂದ್ರಮೇವ, ನದಂ ಯೋಃಯುವತೀನಾಮ್ ॥ ೨೧ ॥

ಓಂ ಶ್ರೀಮತೇ ನಮಃ ಓಮ್ ॥

ಸ್ವಸಾರೋ ಮಾತರಿಭ್ವರೀರರಿಪ್ರಾಃ, ಪತಿಂ ವೋ ಅಘ್ನ್ಯಾನಾಮ್ । ಹಿನ್ವಂತಿ ಚ ಶವಸಾ ವರ್ಧಯಂತಿ ಚ'', ಧೇನೂನಾಮಿಷುಧ್ಯಸಿ ॥ ೨೨ ॥

ಓಂ ಕೇಶವಾಯ ನಮಃ ಓಮ್ ॥

[2]ತಾಂ ಸು ತೇ ಕೀರ್ತಿಂ ಮಘವನ್ ಮಹಿತ್ವಾ, ನದಂ ವ ಓದತೀನಾಮ್ । ಯತ್ ತ್ವಾ ಭೀತೇ ರೋದಸೀ ಅಹ್ವಯೇತಾಂ, ನದಂ ಯೋಃಯುವತೀನಾಮ್ ॥ ೨೩ ॥

ಓಂ ಪುರುಷೋತ್ತಮಾಯ ನಮಃ ಓಮ್ ॥

ಪ್ರಾ ವೋ ದೇವಾ ಆತಿರೋ ದಾಸಮೋಜಃ, ಪತಿಂ ವೋ ಅಘ್ನ್ಯಾನಾಮ್ । ಪ್ರಜಾಯೈ ತ್ವಸ್ಯೈ ಯದಶಿಕ್ಷ ಇಂದ್ರ, ಧೇನೂನಾಮಿಷುಧ್ಯಸಿ ॥ ೨೪ ॥

ಓಂ ಸರ್ವಾಯ ನಮಃ ಓಮ್ ॥

ಯದಚರಸ್ತನ್ವಾ ವಾವೃಧಾನೋ, ನದಂ ವ ಓದತೀನಾಮ್ । ಬಲಾನೀಂದ್ರ ಪ್ರಬ್ರುವಾಣೋ ಜನೇಷು, ನದಂ ಯೋಃಯುವತೀನಾಮ್ ॥ ೨೫ ॥

ಓಂ ಶರ್ವಾಯ ನಮಃ ಓಮ್ ॥

ಮಾಯೇತ್ ಸಾ ತೇ ಯಾನಿ ಯುದ್ಧಾನ್ಯಾಹುಃ, ಪತಿಂ ವೋ ಅಘ್ನ್ಯಾನಾಮ್ । ನಾದ್ಯ ಶತ್ರುಂ ನನು ಪುರಾ ವಿವಿತ್ಸೇ, ಧೇನೂನಾಮಿಷುಧ್ಯಸಿ ॥ ೨೬ ॥

ಓಂ ಶಿವಾಯ ನಮಃ ಓಮ್ ॥

---

2. ೧೦/೫೪.

ಕ ಉ ನು ತೇ ಮಹಿಮನಃ ಸಮಸ್ಯ, ನದಂ ವ ಓದತೀನಾಮ್ । ಅಸ್ಮತ್ ಪೂರ್ವ ಋಷಯೋಽಂತಮಾಪು,ರ್ನದಂ ಯೋಯುವತೀನಾಮ್ ॥ ೨೭ ॥

ಓಂ ಸ್ಥಾಣವೇ ನಮಃ ಓಮ್ ॥

ಯನ್ಮಾತರಂ ಚ ಪಿತರಂ ಚ ಸಾಕಂ, ಪತಿಂ ವೋ ಅಘ್ನ್ಯಾನಾಮ್ । ಅಜನಯಥಾಸ್ತನ್ವಃ೧ ಸ್ವಾಯಾ, ಧೇನೂನಾಮಿಷುಧ್ಯಸಿ ॥ ೨೮ ॥

ಓಂ ಭೂತಾದಯೇ ನಮಃ ಓಮ್ ॥

ಚತ್ವಾರಿ ತೇ ಅಸುರ್ಯಾಣಿ ನಾಮ, ನದಂ ವ ಓದತೀನಾಮ್ । ಅದಾಭ್ಯಾನಿ ಮಹಿಷಸ್ಯ ಸಂತಿ, ನದಂ ಯೋಯುವತೀನಾಮ್ ॥ ೨೯ ॥

ಓಂ ನಿಧಯೇ ನಮಃ ಓಮ್ ॥

ತ್ವಮಂಗ ತಾನಿ ವಿಶ್ವಾನಿ ವಿತ್ಸೇ, ಪತಿಂ ವೋ ಅಘ್ನ್ಯಾನಾಮ್ । ಯೇಭಿಃ ಕರ್ಮಾಣಿ ಮಘವನ್ ಚಕರ್ಥ, ಧೇನೂನಾಮಿಷುಧ್ಯಸಿ ॥ ೩೦ ॥

ಓಂ ಅವ್ಯಯಾಯ ನಮಃ ಓಮ್ ॥

ತ್ವಂ ವಿಶ್ವಾ ದಧಿಷೇ ಕೇವಲಾನಿ, ನದಂ ವ ಓದತೀನಾಮ್ । ಯಾನ್ಯಾವಿರ್ಯಾ ಚ ಗುಹಾ ವಸೂನಿ, ನದಂ ಯೋಯುವತೀನಾಮ್ ॥ ೩೧ ॥

ಓಂ ಸಂಭವಾಯ ನಮಃ ಓಮ್ ॥

ಕಾಮಮಿನ್ಮೇ ಮಘವನ್ ಮಾ ವಿ ತಾರೀಃ, ಪತಿಂ ವೋ ಅಘ್ನ್ಯಾನಾಮ್ । ತ್ವಮಾಜ್ಞಾತಾ ತ್ವಮಿಂದ್ರಾಸಿ ದಾತಾ, ಧೇನೂನಾಮಿಷುಧ್ಯಸಿ ॥ ೩೨ ॥

ಓಂ ಭಾವನಾಯ ನಮಃ ಓಮ್ ॥

ಯೋ ಅದಧಾಜ್ಜ್ಯೋತಿಷಿ ಜ್ಯೋತಿರಂತ,ರ್ನದಂ ವ ಓದತೀನಾಮ್ । ಯೋ ಅಸೃಜನ್ ಮಧುನಾ ಸಂ ಮಧೂನಿ, ನದಂ ಯೋಯುವತೀನಾಮ್ ॥ ೩೩ ॥

ಓಂ ಭರ್ತ್ರೇ ನಮಃ ಓಮ್ ॥

ಅಧ ಪ್ರಿಯಂ ಶೂಷಮಿಂದ್ರಾಯ ಮನ್ಮ, ಪತಿಂ ವೋ ಅಘ್ನ್ಯಾನಾಮ್ । ಬ್ರಹ್ಮಕೃತೋ ಬೃಹದುಕ್ಥಾದವಾಚಿ, ಧೇನೂನಾಮಿಷುಧ್ಯಸಿ ॥ ೩೪ ॥

ಓಂ ಪ್ರಭವಾಯ ನಮಃ ಓಮ್ ॥

[3]ಭೂಯ ಇದ್ವಾವೃಧೇ ವೀರ್ಯಾಯ, ನದಂ ವ ಓದತೀನಾಮ್ । ಏಕೋ ಅಜುರ್ಯೋ ದಯತೇ ವಸೂನಿ, ನದಂ ಯೋಯುವತೀನಾಮ್ ॥ ೩೫ ॥

ಓಂ ಪ್ರಭವೇ ನಮಃ ಓಮ್ ॥

ಪ್ರ ರಿರಿಚೇ ದಿವ ಇಂದ್ರಃ ಪೃಥಿವ್ಯಾಃ, ಪತಿಂ ವೋ ಅಘ್ನ್ಯಾನಾಮ್ । ಅರ್ಧಮಿದಸ್ಯ ಪ್ರತಿ ರೋದಸೀ ಉಭೇ, ಧೇನೂನಾಮಿಷುಧ್ಯಸಿ ॥ ೩೬ ॥

ಓಂ ಈಶ್ವರಾಯ ನಮಃ ಓಮ್ ॥

ಅಧಾ ಮನ್ಯೇ ಬೃಹದಸುರ್ಯಮಸ್ಯ, ನದಂ ವ ಓದತೀನಾಮ್ । ಯಾನಿ ದಾಧಾರ ನಕಿರಾಮಿನಾತಿ, ನದಂ ಯೋಯುವತೀನಾಮ್ ॥ ೩೭ ॥

ಓಂ ಸ್ವಯಂಭುವೇ ನಮಃ ಓಮ್ ॥

ದಿವೇಽದಿವೇ ಸೂರ್ಯೋ ದರ್ಶತೋ ಭೂತ್, ಪತಿಂ ವೋ ಅಘ್ನ್ಯಾನಾಮ್ । ವಿ ಸದ್ಮಾನ್ಯುರ್ವಿಯಾ ಸುಕ್ರತುರ್ಧಾದ್, ಧೇನೂನಾಮಿಷುಧ್ಯಸಿ ॥ ೩೮ ॥

ಓಂ ಶಂಭವೇ ನಮಃ ಓಮ್ ॥

ಅದ್ಯಾ ಚಿನ್ನೂ ಚಿತ್ ತದಪೋ ನದೀನಾಂ, ನದಂ ವ ಓದತೀನಾಮ್ । ಯದಾಭ್ಯೋ ಅರದೋ ಗಾತುಮಿಂದ್ರ, ನದಂ ಯೋಯುವತೀನಾಮ್ ॥ ೩೯ ॥

ಓಂ ಆದಿತ್ಯಾಯ ನಮಃ ಓಮ್ ॥

---

3. ೬/೩೦.

ನಿ ಪರ್ವತಾ ಅದ್ಮಸದೋ ನ ಸೇದುಃ, ಪತಿಂ ವೋ ಅಘ್ನ್ಯಾನಾಮ್ ।
ತ್ವಯಾ ದೃಹ್ಲಾನಿ ಸುಕ್ರತೋ ರಜಾಂಸಿ, ಧೇನೂನಾಮಿಷುಧ್ಯಸಿ ॥ ೪೦ ॥

ಓಂ ಪುಷ್ಕರಾಕ್ಷಾಯ ನಮಃ ಓಮ್ ॥

ಸತ್ಯಮಿತ್ತನ್ನ ತ್ವಾವಾಁ ಅನ್ಯೋ, ಅಸ್ತಿ ನದಂ ವ ಓದತೀನಾಮ್ । ಇಂದ್ರ
ದೇವೋ ನ ಮರ್ತ್ಯೋ ಜ್ಯಾಯಾನ್, ನದಂ ಯೋಯುವತೀನಾಮ್ ॥ ೪೧ ॥

ಓಂ ಮಹಾಸ್ವನಾಯ ನಮಃ ಓಮ್ ॥

ಅಹನ್ನಹಿಂ ಪರಿಶಯಾನಮರ್ಣಃ, ಪತಿಂ ವೋ ಅಘ್ನ್ಯಾನಾಮ್ ।
ಅವಾಸೃಜೋ ಅಪೋ ಅಚ್ಛಾ ಸಮುದ್ರಂ, ಧೇನೂನಾಮಿಷುಧ್ಯಸಿ ॥ ೪೨ ॥

ಓಂ ಅನಾದಿನಿಧನಾಯ ನಮಃ ಓಮ್ ॥

ತ್ವಮಪೋ ವಿ ದುರೋ ವಿಷೂಚೀ,ರ್ನದಂ ವ ಓದತೀನಾಮ್ । ಇಂದ್ರ
ದೃಹ್ಲಮರುಜಃ ಪರ್ವತಸ್ಯ, ನದಂ ಯೋಯುವತೀನಾಮ್ ॥ ೪೩ ॥

ಓಂ ಧಾತ್ರೇ ನಮಃ ಓಮ್ ॥

ರಾಜಾಭವೋ ಜಗತಶ್ಚರ್ಷಣೀನಾಂ, ಪತಿಂ ವೋ ಅಘ್ನ್ಯಾನಾಮ್ । ಸಾಕಂ
ಸೂರ್ಯಂ ಜನಯನ್ ದ್ಯಾಮುಷಾಸಂ, ಧೇನೂನಾಮಿಷುಧ್ಯಸಿ ॥ ೪೪ ॥

ಓಂ ವಿಧಾತ್ರೇ ನಮಃ ಓಮ್ ॥

[4]ನೃಣಾಮು ತ್ವಾ ನೃತಮಂ ಗೀರ್ಭಿರುಕ್ಥೈ,ರ್ನದಂ ವ ಓದತೀನಾಮ್ ।
ಅಭಿ ಪ್ರ ವೀರಮರ್ಚತಾ ಸಬಾಧೋ, ನದಂ ಯೋಯುವತೀನಾಮ್ ॥ ೪೫ ॥

ಓಂ ಧಾತುರುತ್ತಮಾಯ ನಮಃ ಓಮ್ ॥

ಸಂ ಸಹಸೇ ಪುರುಮಾಯೋ ಜಿಹೀತೇ, ಪತಿಂ ವೋ ಅಘ್ನ್ಯಾನಾಮ್ ।

---

4. ೩/೫೧/೪.೫.೬.

ನಮೋ ಅಸ್ಯ ಪ್ರದಿವ ಏಕ ಈಶೇ, ಧೇನೂನಾಮಿಷುಧ್ಯಸಿ ॥ ೪೬ ॥

ಓಂ ಅಪ್ರಮೇಯಾಯ ನಮಃ ಓಮ್ ॥

ಪೂರ್ವೀರಸ್ಯ ನಿಷ್ಷಿಧೋ ಮರ್ತ್ಯೇಷು, ನದಂ ವ ಓದತೀನಾಮ್ । ಪುರೂ ವಸೂನಿ ಪೃಥಿವೀ ಬಿಭರ್ತಿ, ನದಂ ಯೋಯುವತೀನಾಮ್ ॥ ೪೭ ॥

ಓಂ ಹೃಷೀಕೇಶಾಯ ನಮಃ ಓಮ್ ॥

ಇಂದ್ರಾಯ ದ್ಯಾವ ಓಷಧೀರುತಾಪಃ, ಪತಿಂ ವೋ ಅಘ್ನ್ಯಾನಾಮ್ । ರಯಿಂ ರಕ್ಷಂತಿ ಜೀರಯೋ ವನಾನಿ, ಧೇನೂನಾಮಿಷುಧ್ಯಸಿ ॥ ೪೮ ॥

ಓಂ ಪದ್ಮನಾಭಾಯ ನಮಃ ಓಮ್ ॥

ತುಭ್ಯಂ ಬ್ರಹ್ಮಾಣಿ ಗಿರ ಇಂದ್ರ ತುಭ್ಯಂ, ನದಂ ವ ಓದತೀನಾಮ್ । ಸತ್ರಾ ದಧಿರೇ ಹರಿವೋ ಜುಷಸ್ವ, ನದಂ ಯೋಯುವತೀನಾಮ್ ॥ ೪೯ ॥

ಓಂ ಅಮರಪ್ರಭವೇ ನಮಃ ಓಮ್ ॥

ಬೋಧ್ಯಾಪಿ ಪಿರವಸೋ ನೂತನಸ್ಯ, ಪತಿಂ ವೋ ಅಘ್ನ್ಯಾನಾಮ್ । ಸಖೇ ವಸೋ ಜರಿತೃಭ್ಯೋ ವಯೋ ಧಾ, ಧೇನೂನಾಮಿಷುಧ್ಯಸಿ ॥ ೫೦ ॥

ಓಂ ವಿಶ್ವಕರ್ಮಣೇ ನಮಃ ಓಮ್ ॥

[5]ತಾ ಅಸ್ಯ ಸೂದದೋಹಸಃ, ಸೋಮಂ ಶ್ರೀಣಂತಿ ಪೃಶ್ನಯಃ । ಜನ್ಮನ್ ದೇವಾನಾಂ ವಿಶಸ್ತ್ರಿಷ್ವಾ ರೋಚನೇ ದಿವಃ । *ಯಸ್ಯೇದಮಾರಜಃ ॥ ೫೧ ॥

ಓಂ ಮನವೇ ನಮಃ ಓಮ್ ॥

ತುಜೋ ಯುಜೋ ವನಂ ಸಹ ಇಂದ್ರಸ್ಯ ರತ್ಯಂ ಬೃಹತ್ । ನಾಧೃಷ ಆದಧರ್ಷದಾಧೃಷಾಣಂ ಧೃಷಿತಂ ಶವಃ । ಪುರಾ ಯದೀಮತಿವ್ಯಥಿಃ ॥ ೫೨ ॥

---

5. ೮/೬೯/೩. * ಶಾಖಾಂತರಮಂತ್ರಃ.

ಓಂ ತ್ವಷ್ಟ್ರೇ ನಮಃ ಓಮ್ ॥

ಇಂದ್ರಸ್ಯ ಧೃಷಿತಂ ಸಹಃ । ಸ ನೋ ದಧಾತು ತಂ ರಯಿಂ ರಯಿಮ್ । ಪಿಶಂಗಸದೃಶಮಿಂದ್ರಃ ಪತಿಸ್ತವಸ್ತಮೋ ಜನೇಷ್ವಾ ॥ ೫೩ ॥

ಓಂ ಸ್ಥವಿಷ್ಠಾಯ ನಮಃ ಓಮ್ ॥

ತಾ ಅಸ್ಯ ಸೂದದೋಹಸಃ ಸೋಮಂ ಶ್ರೀಣಂತಿ ಪೃಶ್ನಯಃ । ಜನ್ಮನ್ ದೇವಾನಾಂ ವಿಶಸ್ತ್ರಿಷ್ವಾರೋಚನೇ ದಿವಃ । [6]ಇಂದ್ರಮಿದ್ಗಾಥಿನಃ ॥ ೫೪ ॥

ಓಂ ಸ್ಥವಿರಾಯ ನಮಃ ಓಮ್ ॥

ಬೃಹದಿಂದ್ರಮರ್ಕೇಭಿರರ್ಕಿಣಃ । ಇಂದ್ರಂ ವಾಣೀರನೂಷತ । ಇಂದ್ರ ಇದ್ಧರ್ಯೋಃ ಸಚಾ ಸಂಮಿಶ್ಲ ಆ ವಚೋಯುಜಾ ॥ ೫೫ ॥

ಓಂ ಧ್ರುವಾಯ ನಮಃ ಓಮ್ ॥

ಇಂದ್ರೋ ವಜ್ರೀ ಹಿರಣ್ಯಯಃ । ಇಂದ್ರೋ ದೀರ್ಘಾಯ ಚಕ್ಷಸ ಆ ಸೂರ್ಯಂ ರೋಹಯದ್ದಿವಿ । ವಿ ಗೋಭಿರದ್ರಿಮೈರಯತ್ । ಇಂದ್ರ ವಾಜೇಷು ॥ ೫೬ ॥

ಓಂ ಅಗ್ರಾಹ್ಯಾಯ ನಮಃ ಓಮ್ ॥

ನೋಽವ ಸಹಸ್ರಪ್ರಧನೇಷು ಚ । ಉಗ್ರ ಉಗ್ರಾಭಿರೂತಿಭಿಃ । ಇಂದ್ರಂ ವಯಂ ಮಹಾಧನ ಇಂದ್ರಮರ್ಭೇ ಹವಾಮಹೇ । ಯುಜಮ್ ॥ ೫೭ ॥

ಓಂ ಶಾಶ್ವತಾಯ ನಮಃ ಓಮ್ ॥

ವೃತ್ರೇಷು ವಜ್ರಿಣಮ್ । ಸ ನೋ ವೃಷನ್ನಮುಂ ಚರುಂ ಸತ್ರಾದಾವನ್ನಪಾ ವೃಧಿ । ಅಸ್ಮಭ್ಯಮಪ್ರತಿಷ್ಕುತಃ । ತುಂಜೇಽತುಂಜೇ ಯ ಉತ್ತರೇ ॥ ೫೮ ॥

ಓಂ ಕೃಶಾನ್ವಾಯ ನಮಃ ಓಮ್ ॥

6. ೦/೭.

ಸ್ತೋಮಾ ಇಂದ್ರಸ್ಯ ವಜ್ರಿಣಃ । ನ ವಿಂಧೇ ಅಸ್ಯ ಸುಷ್ಟುತಿಮ್ । ವೃಷಾಯೂಥೇವ ವಂಸಗಃ ಕೃಷ್ಟೀರಿಯರ್ತ್ಯೋಜಸಾ । ಈಶಾನಃ ॥ ೫೯ ॥

ಓಂ ಲೋಹಿತಾಕ್ಷಾಯ ನಮಃ ಓಮ್ ॥

ಅಪ್ರತಿಷ್ಕುತಃ । ಯ ಏಕಶ್ಚರ್ಷಣೀನಾಂ ವಸೂನಾಮಿರಜ್ಯತಿ । ಇಂದ್ರಃ ಪಂಚಕ್ಷಿತೀನಾಮ್ । ಇದ್ರಂ ವೋ ವಿಶ್ವತಸ್ಪರಿ ಹವಾಮಹೇ ॥ ೬೦ ॥

ಓಂ ಪ್ರತರ್ದನಾಯ ನಮಃ ಓಮ್ ॥

ಜನೇಭ್ಯಃ । ಅಸ್ಮಾಕಮಸ್ತು ಕೇವಲಃ । ತಾ ಅಸ್ಯ ಸೂದದೋಹಸಃ । ಸೋಮಂ ಶ್ರೀಣಂತಿ ಪೃಶ್ನಯಃ । ಜನ್ಮನ್ ದೇವಾನಾಂ ವಿಶಃ ॥ ೬೧ ॥

ಓಂ ಪ್ರಭೂತಾಯ ನಮಃ ಓಮ್ ॥

ತ್ರಿಷ್ವಾರೋಚನೇ ದಿವಃ । *ಸುತಸ್ತೇ ಸೋಮ ಉಪಯಾಹಿ ಯಜ್ಞಮ್ । ಮತ್ಸ್ವಾ ಮದಂ ಪುರುವಾರಂ ಮಘಾಯ । ಮಂಹಿಷ್ಠ ಇಂದ್ರ ವಿಜುರಃ ॥ ೬೨ ॥

ಓಂ ತ್ರಿಕಕುಬ್ಧಾಮ್ನೇ ನಮಃ ಓಮ್ ॥

ಗೃಣಧ್ವೈ । ಸ ಸಾಹತುರ್ವೃತ್ರಹತ್ಯೇಷು ಶತ್ರೂನ್ಯಭುರ್ವಿಗಾಹ ಏಷಃ । ಸ ನೋ ನೇತಾರಂ ಮಹಯಾಮ ಇಂದ್ರಮ್ । ಇನೋ ವಸು ॥ ೬೩ ॥

ಓಂ ಪವಿತ್ರಾಯ ನಮಃ ಓಮ್ ॥

ಸಮಜಃ ಪರ್ವತೇಷ್ವಾಃ ಪ್ರತಿವಾಮೃಜೀಷೀ । ಇಂದ್ರಃ ಶಶ್ವದ್ಭಿರ್ಜೋರ್ಹೂತ್ರ ಏವೈಃ । ತಾ ಅಸ್ಯ ಸೂದದೋಹಸಃ ಸೋಮಂ ಶ್ರೀಣಂತಿ ॥ ೬೪ ॥

ಓಂ ಮಂಗಲಾಯ ನಮಃ ಓಮ್ ॥

ಪೃಶ್ನಯಃ । ಜನ್ಮನ್ ದೇವಾನಾಂ ವಿಶಸ್ತ್ರಿಷ್ವಾ ರೋಚನೇ ದಿವಃ । [7]ಅಭಿತ್ವಾ ಶೂರ ನೋನುಮೋಽದುಗ್ಧಾ ಇವ ಧೇನವಃ । ಈಶಾನಮ್ ॥ ೬೫ ॥

* ಪಾಠಾಂತರಂ ಸ್ವಮಂತ್ರಾಃ

ಓಂ ಪರಾಯ ನಮಃ ಓಮ್ ॥

ಅಸ್ಯ ಜಗತಃ ಸ್ವರ್ದೃಶಮೀಶಾನಮಿಂದ್ರ ತಸ್ಥುಷಃ । ಈಶಾನಮಿಂದ್ರ ತಸ್ಥುಷ ಈಶಾನಮಿಂದ್ರ ತಸ್ಥುಷಃ । ನ ತ್ವಾವಾँ ಅನ್ಯಃ ॥ ೬೬ ॥

ಓಂ ಈಶಾನಾಯ ನಮಃ ಓಮ್ ॥

ದಿವ್ಯೋ ನ ಪಾರ್ಥಿವೋ ನ ಜಾತೋ ನ ಜನಿಷ್ಯತೇ । ನ ಜಾತೋ ನ ಜನಿಷ್ಯತೇ ನ ಜಾತೋ ನ ಜನಿಷ್ಯತೇ । ಸ್ವಾದೋಃ ಸ್ವಾದೀಯಃ ॥ ೬೭ ॥

ಓಂ ಪ್ರಾಣದಾಯ ನಮಃ ಓಮ್ ॥

ಸ್ವಾದುನಾ ಸೃಜಾಸಂ ಗವ್ಯಂತಸ್ತ್ವಾ ಹವಾಮಹೇ । [8]ಅಭಿ ತ್ವಾ ಪೂರ್ವಪೀತಯ ಇಂದ್ರ ಸ್ತೋಮೇಭಿರಾಯವಃ । ಸಮೀಚೀನಾಸ ಋಭವಃ ॥ ೬೮ ॥

ಓಂ ಪ್ರಾಣಾಯ ನಮಃ ಓಮ್ ॥

ಸಮಸ್ವರನ್ ರುದ್ರಾ ಗೃಣಂತ ಪೂರ್ವ್ಯಮ್ । ರುದ್ರಾ ಗೃಣಂತ ಪೂರ್ವ್ಯಂ ರುದ್ರಾ ಗೃಣಂತ ಪೂರ್ವ್ಯಮ್ । ಅಸ್ಯೇದಿಂದ್ರೋ ವಾವೃಧೇ ವೃಷ್ಣ್ಯಮ್ ॥ ೬೯ ॥

ಓಂ ಜ್ಯೇಷ್ಠಾಯ ನಮಃ ಓಮ್ ॥

ಶವೋ ಮದೇ ಸುತಸ್ಯ ವಿಷ್ಣವಿ । ಮದೇ ಸುತಸ್ಯ ವಿಷ್ಣವಿ ಮದೇ ಸುತಸ್ಯ ವಿಷ್ಣವಿ । ಅದ್ಯಾ ತಮಸ್ಯ ಮಹಿಮಾನಮ್ ॥ ೭೦ ॥

ಓಂ ಶ್ರೇಷ್ಠಾಯ ನಮಃ ಓಮ್ ॥

ಆಯವೋಽನುಷ್ಟುವಂತಿ ಪೂರ್ವಥಾ । [9]ಇಂದ್ರಸ್ಯ ನು ವೀರ್ಯಾಣಿ ಪ್ರ ವೋಚಂ ಯಾನಿ ಚಕಾರ ಪ್ರಥಮಾನಿ ವಜ್ರೀ । ಅಹನ್ನಹಿಮನ್ವಪಃ ॥ ೭೧ ॥

ಓಂ ಪ್ರಜಾಪತಯೇ ನಮಃ ಓಮ್ ॥

---

7. ೭-೩೨-೨೨. ೨೩. 8. ೮-೩-೭. 9. ೯ ೧/೩೨.

ತತರ್ದ ಪ್ರ ವಕ್ಷಣಾ ಅಭಿನತ್ ಪರ್ವತಾನಾಮ್ । ಅಹನ್ನಹಿಂ ಪರ್ವತೇ ಶಿಶ್ರಿಯಾಣಂ, ತ್ವಷ್ಟಾಸ್ಮೈ ವಜ್ರಂ ಸ್ವರ್ಯಂ ತತಕ್ಷ ॥ ೭೨ ॥

ಓಂ ಹಿರಣ್ಯಗರ್ಭಾಯ ನಮಃ ಓಮ್ ॥

ವಾಶ್ರಾ ಇವ ಧೇನವಃ ಸ್ಯಂದಮಾನಾ, ಅಂಜಃ ಸಮುದ್ರಮವಜಗ್ಮುರಾಪಃ । ವೃಷಾಯಮಾಣೋ ವೃಣೀತ ಸೋಮಂ ತ್ರಿಕದ್ರುಕೇಷು ॥ ೭೩ ॥

ಓಂ ಭೂಗರ್ಭಾಯ ನಮಃ ಓಮ್ ॥

ಅಪಿಬತ್ ಸುತಸ್ಯ । ಆ ಸಾಯಕಂ ಮಘವಾ ದತ್ತ ವಜ್ರಮಹನ್ನೇನಂ ಪ್ರಥಮಜಾಮಹೀನಾಮ್ । ಯದಿಂದ್ರಾಹನ್ ಪ್ರಥಮಜಾಮಹೀನಾಮ್ ॥ ೭೪ ॥

ಓಂ ಮಾಧವಾಯ ನಮಃ ಓಮ್ ॥

ಆನ್ಮಾಯಿನಾಮಮಿನಾಃ ಪ್ರೋತ ಮಾಯಾಃ । ಆತ್ಸೂರ್ಯಂ ಜನಯನ್ ದ್ಯಾಮುಷಾಸಂ ತಾದೀತ್ನಾ ಶತ್ರುಂ ನ ಕಿಲಾ ವಿವಿತ್ಸೇ ॥ ೭೫ ॥

ಓಂ ಮಧುಸೂದನಾಯ ಓಮ್ ॥

ಅಹನ್ ವೃತ್ರಂ ವೃತ್ರತರಂ ವ್ಯಂಸಮಿಂದ್ರೋ ವಜ್ರೇಣ ಮಹತಾ ವಧೇನ । ಸ್ಕಂಧಾಂಸೀವ ಕುಲಿಶೇನಾವಿವೃಕ್ಣಾಽಹಿಃ ಶಯತ ಉಪಪೃಕ್ ॥ ೭೬ ॥

ಓಂ ಈಶ್ವರಾಯ ನಮಃ ಓಮ್ ॥

ಪೃಥಿವ್ಯಾಃ । ಅಯೋದ್ಧೇವ ದುರ್ಮದ ಆ ಹಿ ಜುಹ್ವೇ ಮಹಾವೀರಂ ತುವಿಬಾಧಮೃಜೀಷಮ್ । ನಾತಾರೀದಸ್ಯ ಸಮೃತಿಂ ವಧಾನಾಮ್ ॥ ೭೭ ॥

ಓಂ ವಿಕ್ರಮಿಣೇ ನಮಃ ಓಮ್ ॥

ಸಂ ರುಜಾನಾಃ ಪಿಪಿಷ ಇಂದ್ರಶತ್ರುಃ । ಅಪಾದಹಸ್ತೋ ಅಪೃತನ್ಯದಿಂದ್ರಮಾಸ್ಯ ವಜ್ರಮಧಿ ಸಾನೌ ಜಘಾನ । ವೃಷ್ಣಃ ॥ ೭೮ ॥

ಓಂ ಧನ್ವಿನೇ ನಮಃ ಓಮ್ ॥

ವಧ್ರಿಃ ಪ್ರತಿಮಾನಂ ಬುಭೂಷನ್ ಪುರುತ್ರಾ ವೃತ್ರೋ ಅಶಯದ್ವ್ಯಸ್ತಃ । ನದಂ ನ ಭಿನ್ನಮಮುಯಾ ಶಯಾನಂ ಮನೋ ರುಹಾಣಾಃ ॥ ೭೯ ॥

ಓಂ ಮೇಧಾವಿನೇ ನಮಃ ಓಮ್ ॥

ಅತಿಯಂತ್ಯಾಪಃ । ಯಾಶ್ಚಿದ್ವೃತ್ರೋ ಮಹಿನಾ ಪರ್ಯತಿಷ್ಠತ್ ತಾಸಾಮಹಿಃ ಪತ್ಸುತಃ ಶೀರ್ಬಭೂವ । ನೀಚಾವಯಾ ಅಭವದ್ ವೃತ್ರಪುತ್ರಾ ॥ ೮೦ ॥

ಓಂ ವಿಕ್ರಮಾಯ ನಮಃ ಓಮ್ ॥

ಇಂದ್ರೋ ಅಸ್ಯಾ ಅವ ವಧರ್ಜಭಾರ । ಉತ್ತರಾ ಸೂರಧರಃ ಪುತ್ರ ಆಸೀದ್ ದಾನುಃ ಶಯೇ ಸಹವತ್ಸಾ ನ ಧೇನುಃ ॥ ೮೧ ॥

ಓಂ ಕ್ರಮಾಯ ನಮಃ ಓಮ್ ॥

ಅತಿಷ್ಠಂತೀನಾಮನಿವೇಶನಾನಾಂ ಕಾಷ್ಠಾನಾಂ ಮಧ್ಯೇ ನಿಹಿತಂ ಶರೀರಮ್ । ವೃತ್ರಸ್ಯ ನಿಣ್ಯಂ ವಿಚರಂತ್ಯಾಪೋ ದೀರ್ಘಂ ತಮ ಆಶಯತ್ ॥ ೮೨ ॥

ಓಂ ಅನುತ್ತಮಾಯ ನಮಃ ಓಮ್ ॥

ಇಂದ್ರಶತ್ರುಃ । ದಾಸಪತ್ನೀರಹಿಗೋಪಾ ಅತಿಷ್ಠನ್ ನಿರುದ್ಧಾ ಆಪಃ ಪಣಿನೇವ ಗಾವಃ । ಅಪಾಂ ಬಿಲಮಪಿಹಿತಮ್ ॥ ೮೩ ॥

ಓಂ ದುರಾಧರ್ಷಾಯ ನಮಃ ಓಮ್ ॥

ಯದಾಸೀದ್ ವೃತ್ರಂ ಜಘನ್ವಾँ ಅಪ ತದ್ ವವಾರ । ಅಶ್ವ್ಯೋ ವಾರೋ ಅಭವಸ್ತದಿಂದ್ರ ಸೃಕೇ ಯತ್ತ್ವಾ ಪ್ರತ್ಯಹನ್ ದೇವ ಏಕಃ ॥ ೮೪ ॥

ಓಂ ಕೃತಜ್ಞಾಯ ನಮಃ ಓಮ್ ॥

ಅಜಯೋ ಗಾ ಅಜಯಃ ಶೂರ ಸೋಮಮವಾಸೃಜಃ ಸರ್ತವೇ ಸಪ್ತಸಿಂಧೂನ್ । ನಾಸ್ಮೈ ವಿದ್ಯುನ್ನ ತನ್ಯತುಃ ಸಿಷೇಧ ನ ಯಾಂ ಮಿಹಮ್ ॥ ೮೫ ॥

ಓಂ ಕೃತಯೇ ನಮಃ ಓಮ್ ॥

ಅಕ್ರರದ್ಧಾಮನಿಂ ಚ । ಇಂದ್ರಶ್ಚ ಯದ್ಯುಯುಧಾತೇ ಅಹಿಶ್ಚೋತಾಪರೀಭ್ಯೋ ಮಘವಾ ವಿಜಿಗ್ಯೇ । ಅಹೇರ್ಯಾತಾರಂ ಕಮಪಶ್ಯಃ ॥ ೮೬ ॥

ಓಂ ಆತ್ಮವತೇ ನಮಃ ಓಮ್ ॥

ಇಂದ್ರ ಹೃದಿ ಯತ್ತೇ ಜಘ್ನುಷೋ ಭೀರಗಚ್ಛತ್ । ನವ ಚ ಯನ್ನವತಿಂ ಚ ಸ್ರವಂತೀಃ ಶ್ಯೇನೋ ನ ಭೀತೋ ಅತರೋ ರಜಾಂಸಿ ॥ ೮೭ ॥

ಓಂ ಸುರೇಶಾಯನಮಃ ಓಮ್ ॥

ಇಂದ್ರೋ ಯಾತೋಽವಸಿತಸ್ಯ ರಾಜಾ ಶಮಸ್ಯ ಚ ಶೃಂಗಿಣೋ ವಜ್ರಬಾಹುಃ । ಸೇದು ರಾಜಾ ಕ್ಷಯತಿ ಚರ್ಷಣೀನಾಮರಾನ್ನ ನೇಮಿಃ ॥ ೮೮ ॥

ಓಂ ಶರಣಾಯ ನಮಃ ಓಮ್ ॥

ಪರಿ ತಾ ಬಭೂವ ॥ [10]ತ್ವೇ ಹ ಯತ್ ಪಿತರಶ್ಚಿನ್ನ ಇಂದ್ರ ವಿಶ್ವಾ ವಾಮಾ ಜರಿತಾರೋ ಅಸನ್ವನ್ । ತ್ವೇ ಗಾವಃ ಸುದುಘಾಸ್ತ್ವೇ ಹ್ಯಶ್ವಾಃ ॥ ೮೯ ॥

ಓಂ ಶರ್ಮಣೇ ನಮಃ ಓಮ್ ॥

ತ್ವಂ ವಸು ದೇವಯತೇ ವನಿಷ್ಠಃ । ರಾಜೇವ ಹಿ ಜನಿಭಿಃ, ಕ್ಷೇಷ್ಯೇವಾಽವ ದ್ಯುಭಿರಭಿವಿದುಷ್ಕವಿಸನ್ । ಪಿಶಾ ಗಿರೋ ಮಘವನ್ ॥ ೯೦ ॥

ಓಂ ವಿಶ್ವರೇತಸೇ ನಮಃ ಓಮ್ ॥

ಗೋಭಿರಶ್ವೈಸ್ತ್ವಾಯತಃ ಶಿಶೀಹಿ ರಾಯೇ ಅಸ್ಮಾನ್ । ಇಮಾ ಉ ತ್ವಾ ಪಸ್ಪೃಧಾನಾಸೋ ಅತ್ರ ಮಂದ್ರಾ ಗಿರೋ ದೇವಯಂತೀರುಪ ಸ್ಥುಃ ॥ ೯೧ ॥

ಓಂ ಪ್ರಜಾಭವಾಯ ನಮಃ ಓಮ್ ॥

10. ೭/೧೮/೧-೧೫.

